पाङ्गी श्रीनिवासाचार्यविरचितम्

# श्रीतन्त्रसारोक्तमन्त्रव्याख्यानम्

(ಸಂಸ್ಕೃತ ಹಾಗೂ ಕನ್ನಡದಲ್ಲಿ ತಂತ್ರಸಾರೋಕ್ತ ಸಮಗ್ರ ಮಂತ್ರಗಳ ವ್ಯಾಖ್ಯಾನ ಹಾಗೂ ವಿವರಣೆ)



''भैष्मीसत्यासमेतमखिलप्रदमिन्दिरेशम्''

सम्पादकः अनुवादकश्च

पं. नरसिंहाचार्य कट्टि

प्रकाशनम् :- विश्वमध्वमहापरिषत् उत्तरादिमठः

V.M.M.P. Publication No. 34

पाङ्गी. श्रीनिवासाचार्यविरचितम्

# श्रीतन्त्रसारोक्तमन्त्रव्याख्यानम्

सम्पादकः अनुवादकश्च

पं. नरसिंहाचार्य कट्टि

ಪ್ರಕಾಶನ ಸೇವೆ :

ಮಾಧ್ವಸಂಘದ ಸುವರ್ಣಮಹೋತ್ಸವ ಸೇವಾ ಸಮಿತಿ,

ಅರಿಅರ

प्रकाशनम्

विश्वमध्वमहापरिपत्

उत्तरादिमठः, श्रीजयतीर्थविद्यापीठम्,

वसवनगुडि वेङ्गळूरु

TANTRASĀRŌKTAMANTRAVYĀKHYĀNAM

**(A detailed commentary on the 72 Mahāmantrās mentioned in the work Tantra Sāra of Sri Madhvācārya by Śri Pangri Srinivasacharya and edited and translated by Pt. Śri Narasimhacharya Katti, Nyāya-Vedānta Prādhyāpaka, Śri Jayatīrtha Vidyāpīṭa)**

ISBN : 81-903336-1-5

Copies : 1000

First Edition : November 2006

No.of Pages : XX+219



Price : Rs. 75=00

Copies can be had from :

**1. Jayateertha Vidyapeetha**
Sri Uttaradi Math
Shankarapurm, 5th Cross
Basavanagudi, Bangalore - 04

**2. Vishva Madhwa Mahaparishat**
#11 2nd Floor Uttaradimath Building.
UttaradiMath Road, Shankarpuram,
Basavanagudi BANGALORE - 4
Phone : 080 26603692

ಅಕ್ಷರ ಜೋಡಣೆ : ವಿಶ್ವಮಧ್ವಮಹಾಪರಿಷತ್ ಸಂಶೋಧನ ವಿಭಾಗ

Printed by :
**VAGARTHA,** 149, 8th Cross, N.R.Colony, Bangalore - 4 Ph.2242 7677.



ಶ್ರೀ 1008 ಶ್ರೀ ಶ್ರೀಸತ್ಯಪ್ರಮೋದತೀರ್ಥರು



ಶ್ರೀಮದುತ್ತರಾದಿಮಠಾಧೀಶರಾದ
ಶ್ರೀ 1008 ಶ್ರೀ ಶ್ರೀಸತ್ಯಾತ್ಮತೀರ್ಥರು



ಶ್ರೀ ಹರಿಹರೇಶ್ವರ



ಶ್ರೀ ವ್ಯಾಸರಾಜಪ್ರತಿಷ್ಠಿತ
ಶ್ರೀಮುಖ್ಯಪ್ರಾಣದೇವರು

ಶ್ರೀ ಟೀಕಾಕೃತ್ಪಾದರು
ಶ್ರೀ ರಘೂತ್ತಮತೀರ್ಥರು



ಶ್ರೀ ರಾಘವೇಂದ್ರತೀರ್ಥರು
ಶ್ರೀ ಸತ್ಯಪ್ರಮೋದತೀರ್ಥರು



ಹರಿಹರ ಮಾಧ್ವಸಂಘ

॥ ಶ್ರೀದಿಗ್ವಿಜಯರಾಮೋ ವಿಜಯತೇ ॥

ಶ್ರೀಮದುತ್ತರಾದಿಮಠಾಧೀಶರಾದ

ಶ್ರೀ ೧೦೦೮ ಶ್ರೀಸತ್ಯಾತ್ಮತೀರ್ಥ ಶ್ರೀಪಾದಂಗಳವರ



# ಅನುಗ್ರಹ ಸಂದೇಶ

ಕಾಮಧೇನು ಕಲ್ಪವೃಕ್ಷಗಳಂತೆ ಬೇಡಿದ ಎಲ್ಲ ಇಷ್ಟಾರ್ಥಗಳನ್ನು ಕೊಟ್ಟು ಸಕಲ ಅನಿಷ್ಟಗಳನ್ನು ಕಳೆಯುವ ಮಹಾಸಾಮರ್ಥ್ಯವನ್ನು ಹೊಂದಿದ ಮುಖ್ಯವಾಗಿ ಮೋಕ್ಷವನ್ನು ನೀಡುವ ಅಷ್ಟಮಹಾಮಂತ್ರಗಳನ್ನು ಹಾಗೂ ದ್ವಾಸಪ್ತತಿ (೭೨) ಮಹಾಮಂತ್ರಗಳನ್ನು ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯರು ತಂತ್ರಸಾರಸಂಗ್ರಹದಲ್ಲಿ ನಿಖಿಲಜನರ ಉದ್ಧಾರಕ್ಕಾಗಿ ನಿರೂಪಣೆ ಮಾಡಿದ್ದಾರೆ. ಈ ಮಂತ್ರಗಳು ಫಲಪ್ರದವಾಗಬೇಕಾದರೆ ಅರ್ಥಾನುಸಂಧಾನಪೂರ್ವಕವಾಗಿ ಶುದ್ಧರಾಗಿ ಸದಾಚಾರರತರಾಗಿ ಜಪಮಾಡಬೇಕು. ಗುರುಗಳಿಂದ ಉಪದೇಶವನ್ನು ಪಡೆದೇನೇ ಜಪಮಾಡಬೇಕು. ಅರ್ಥಾನುಸಂಧಾನವಿಲ್ಲದಿದ್ದರೆ ಮಾತ್ರ ಮಂತ್ರಗಳು ವ್ಯರ್ಥ. ''ತ್ರಾತಿ ಮಾನತಃ'' ಜ್ಞಾನವಿದ್ದರೆ ಮಾತ್ರ ರಕ್ಷಣೆಮಾಡುವ ಕಾರಣವೆ ''ಮಂತ್ರ'' ಎನುತ್ತಾರೆ. (ಮನ್=ಜ್ಞಾನ, ತ್ರ=ರಕ್ಷಣೆ) ಶ್ರೀಮದಾಚಾರ್ಯರು ಪರಮಾನುಗ್ರಹಮಾಡಿ ಉಪದೇಶಮಾಡಿದ ಮಂತ್ರಗಳಿಗೆ ಶ್ರೀಮದಾಚಾರ್ಯರೇ ತೋರಿಸಿದ ಮಾರ್ಗದಲ್ಲಿ ಅನೇಕ ಮಹನೀಯರಾದ ವ್ಯಾಖ್ಯಾನಕಾರರು ವ್ಯಾಖ್ಯಾನ ಮಾಡಿ ಪರಮೋಪಕಾರ ಮಾಡಿದ್ದಾರೆ. ಮಹನೀಯರ ಮಾಲಿಕೆಯಲ್ಲಿ ಒಬ್ಬರಾದ ಮಹಾಜ್ಞಾನಿಗಳಾದ ಶ್ರೀ ಪಾಂಘ್ರೀ ಶ್ರೀನಿವಾಸಾಚಾರ್ಯರು ವಿರಚಿಸಿದ ಮಂತ್ರಗಳ ವ್ಯಾಖ್ಯಾನಗ್ರಂಥವನ್ನು ನಮ್ಮ ಗುರುಗಳು ಸಂಗ್ರಹಮಾಡಿ ಹೊಸಪೇಟೆಯ ಗ್ರಂಥಭಂಡಾರದಲ್ಲಿ ಇಟ್ಟಿದ್ದರು. ಅವರ ಪರಮಾನುಗ್ರಹ ಬಲದಿಂದ ಗ್ರಂಥವನ್ನು ಪ್ರಕಾಶನ ಮಾಡುವ ಸುಯೋಗ ''ವಿಶ್ವಮಧ್ವಮಹಾಪರಿಷತ್'' ಸಂಸ್ಥೆಗೆ ಬಂದಿದೆ. ಪರಿಷತ್ತಿನ ಈ ಕಾರ್ಯಕ್ಕೆ ''ಹರಿಹರದ ಮಾಧ್ವಸಂಘ''ದವರು ಸಂಘದ ಸುವರ್ಣಮಹೋತ್ಸವದ ಸವಿನೆನಪಿಗಾಗಿ ಸಂಪೂರ್ಣ ಧನಸಹಾಯಮಾಡುವದಾಗಿ ಮುಂದೆ ಬಂದರು. ನಿಜವಾಗಿಯೂ ಸಾರ್ಥಕವಾದ ಕಾರ್ಯವಿದು. ನಿರಂತರವಾಗಿ ಪಂಡಿತರಿಂದ ಪಾಠ ಪ್ರವಚನಗಳನ್ನು ಮಾಡಿಸುತ್ತ ಬಂದಿರುವ ಈ ಸಂಘದ ಕಾರ್ಯಗಳು ನಿಜವಾಗಿ ಸುತ್ತ್ಯವಾಗಿವೆ. ಈ ಗ್ರಂಥದ ಪ್ರಕಾಶನ ಮಾಡಿಸಿದ ಪುಣ್ಯದಿಂದ ಇನ್ನೂ ವಿಶೇಷವಾಗಿ ಶ್ರೀಮದಾಚಾರ್ಯರ ಶಾಸ್ತ್ರಗಳ ಪಾಠಪ್ರವಚನವನ್ನು ನಡೆಸುವ ಸೌಭಾಗ್ಯವು ಈ ಸಂಘಕ್ಕೆ ಬರುವದರಲ್ಲಿ ಸಂದೇಹವಿಲ್ಲ.

ಇದೊಂದು ಆದರ್ಶ. ಇದೇ ರೀತಿ ಸಂಘಸಂಸ್ಥೆಗಳ ಉತ್ಸವಗಳಿರಬಹುದು ಅಥವಾ ವೈಯಕ್ತಿಕವಾಗಿ ಉಪನಯನ, ವಿವಾಹ, ಗೃಹಪ್ರವೇಶಾದಿ ಶುಭಕಾರ್ಯಗಳು ಅಥವಾ ಶ್ರಾದ್ಧಾದಿಗಳಿರಬಹುದು. ಅಂತಹ ಸಂದರ್ಭಗಳಲ್ಲಿ ಪ್ರಾಚೀನವಾದ ಅಪ್ರಕಟಿತವಾದ ಲೋಕೋಪಯೋಗಿ-ಯಾದ ಗ್ರಂಥಗಳನ್ನು ಪ್ರಕಾಶನ ಮಾಡುವದಕ್ಕೆ ಸಹಾಯಮಾಡಿದರೆ ಶ್ರೀಮದಾಚಾರ್ಯರ ವೇದವ್ಯಾಸದೇವರ ದೊಡ್ಡ ಸೇವೆ ಹಾಗೂ ಮಹಾಪುಣ್ಯ.

ಈ ಸಂಸ್ಕೃತದ ವ್ಯಾಖ್ಯಾನವು ಎಲ್ಲರಿಗೂ ಉಪಯೋಗವಾಗಲಿ ಎಂಬ ದೃಷ್ಟಿಯಿಂದ ನಮ್ಮ ಪ್ರಿಯ ಶಿಷ್ಯರಾದ ಉತ್ತಮ ವಿದ್ವಾಂಸರು ಹಾಗೂ ಪರಮಸಾತ್ವಿಕರು, ಜಯತೀರ್ಥವಿದ್ಯಾಪೀಠದಲ್ಲಿ ನಿರಂತರ ಉದ್ಗ್ರಂಥಗಳ ಪಾಠಪ್ರವಚನವನ್ನು ಮಾಡಿಕೊಂಡಿರುವ ಪಂಡಿತ ನರಸಿಂಹಾಚಾರ್ಯ ಕಟ್ಟಿ ಇವರು ಮೂಲಗ್ರಂಥವನ್ನು ಬಹಳ ಶ್ರಮಪೂರ್ವಕವಾಗಿ ಸಂಶೋಧನೆ ಮಾಡುವದರ ಜೊತೆಗೆ ಕನ್ನಡದಲ್ಲಿ ಮಂತ್ರಗಳಿಗೆ ಸುಂದರವಾಗಿ ಭಾವಾರ್ಥಗಳನ್ನು ಬರೆದಿದ್ದಾರೆ.

ಅದರಂತೆ ನಮ್ಮ ಪ್ರಿಯಶಿಷ್ಯನಾದ ಶ್ರೀಮಹಿದಾಸಾಚಾರ್ಯನು ಅಕ್ಷರವಿನ್ಯಾಸ ಸಹಾಯವನ್ನು ಮಾಡಿದ್ದಾನೆ.

ಇವರೆಲ್ಲರಿಗೂ ನಮ್ಮ ಉಪಾಸ್ಯಮೂರ್ತಿಯಾದ ಶ್ರೀಮೂಲರಾಮದಿಗ್ವಿಜಯರಾಮ-ವೇದವ್ಯಾಸದೇವರು ಪೂರ್ಣಾನುಗ್ರಹಮಾಡಿ ಜ್ಞಾನಭಕ್ತಿವೈರಾಗ್ಯಗಳನ್ನು ದಯಪಾಲಿಸ-ಲೆಂದು ಪ್ರಾರ್ಥಿಸುತ್ತೇವೆ.

ಇತ್ಯನೇಕ ನಾರಾಯಣಸ್ಮರಣೆಗಳು

ಪಾರ್ಥಿವ, ಕಾರ್ತಿಕ ಕೃಷ್ಣ ಪಂಚಮಿ

## ಆಶೀರ್ವಚನ

ಮನುಷ್ಯನ ಮುಕ್ತಿಗೆ ಸಾಧನವಾದದ್ದು ಅಪರೋಕ್ಷಜ್ಞಾನ. ಆ ಅಪರೋಕ್ಷಜ್ಞಾನದ ಅನಿವಾರ್ಯ ಸಾಧನ ಯಜ್ಞ, ದಾನ, ತಪಸ್ಸು. ಅದನ್ನೇ ಶ್ರೀಕೃಷ್ಣಪರಮಾತ್ಮ ನುಡಿದ "ಯಜ್ಞದಾನ ತಪಃ ಕರ್ಮ ನ ತ್ಯಾಜ್ಯಂ ಕಾರ್ಯಮೇವ ತತ್" ಎಂದು. ಈ ಯಜ್ಞಗಳು ಅನೇಕ ವಿಧವಾಗಿವೆ. ದ್ರವ್ಯಯಜ್ಞ, ಜ್ಞಾನಯಜ್ಞ, ಜಪಯಜ್ಞ ಇತ್ಯಾದಿ. ಉಳಿದ ಯಜ್ಞಗಳಿಗೆ ಬಹಳ ಶ್ರಮ. ಆದರೆ ಜಪಯಜ್ಞ ಯಾರಾದರೂ ಸುಲಭವಾಗಿ ಮಾಡಬಹುದಾದದ್ದು. ಈ ಜಪದಿಂದ ಅಂತರಂಗದ ಶುದ್ಧಿ, ಸಂಶಯ ನಿವೃತ್ತಿ, ಜ್ಞಾನಪ್ರಾಪ್ತಿ ಮೊದಲಾದ ಐಹಿಕ ಆಮುಷ್ಮಿಕ ಸಕಲ ಫಲಗಳೂ ಸಿದ್ಧಿಸುತ್ತವೆ.

ಇಂತಹ ಜಪಯಜ್ಞಕ್ಕೆ ಬೇಕಾದ ಪವಿತ್ರವಾದ ಅತ್ಯುತ್ತಮವಾದ ಮಂತ್ರಗಳನ್ನು ಸಕಲ ಸಜ್ಜನರ ಉದ್ಧಾರಕ್ಕಾಗಿ ಶ್ರೀಮದಾಚಾರ್ಯರು ಪರಮಕರುಣೆಯಿಂದ ಸಂಗ್ರಹಮಾಡಿ ನಮಗೆ ನೀಡಿದ್ದಾರೆ. ಅವುಗಳನ್ನು ಅರ್ಥಾನುಸಂಧಾನಪೂರ್ವಕವಾಗಿ ಜಪಿಸಿದರೆ ವಿಶೇಷ ಫಲ. ಅದಕ್ಕಾಗಿ ಜ್ಞಾನಿಗಳಾದ ಪಾಂಘ್ರಿ ಶ್ರೀನಿವಾಸಾಚಾರ್ಯರು ಆ ಎಲ್ಲ ಮಂತ್ರಗಳ ಅರ್ಥಗಳನ್ನು ಬಹಳ ಸುಂದರವಾಗಿ ನಿರೂಪಿಸಿ ಕೊಟ್ಟಿದ್ದಾರೆ.

ಅದನ್ನು ವಿದ್ವಾಂಸರಾದ **ಕಟ್ಟಿ ನರಸಿಂಹಾಚಾರ್ಯ**ರು ಬಹಳ ಶ್ರಮಪಟ್ಟು ಶ್ರದ್ಧೆಯಿಂದ ಸಂಪಾದನೆ ಮಾಡಿ ಅನುವಾದ ಮಾಡಿದ್ದಾರೆ. ತಂತ್ರಸಾರದ ಬೇರೆ ಬೇರೆ ವ್ಯಾಖ್ಯಾನಗಳು, ಸಿದ್ಧಾಂತಕೌಮುದಿ, ವ್ಯಾಕರಣಮಹಾಭಾಷ್ಯ ಮೊದಲಾದ ಅನೇಕ ಗ್ರಂಥಗಳನ್ನು ಅವಲೋಕಿಸಿ ಪರಾಮರ್ಶಿಸಿ ವಿದ್ವತ್ಪೂರ್ಣವಾಗಿ ಸಂಪಾದನೆ ಮಾಡಿದ್ದಾರೆ. ಅವರಿಗೆ ಭಗವಂತನು ಗುರುಗಳು ಇತೋಽಪ್ಯತಿಶಯವಾಗಿ ಜ್ಞಾನಭಕ್ತಿವೈರಾಗ್ಯಗಳನ್ನು ನೀಡಲಿ. ಇನ್ನೂ ಹಲವು ಗ್ರಂಥಗಳ ಸಂಪಾದನೆ, ರಚನೆ ಅನುವಾದಗಳನ್ನು ಅವರಿಂದ ಮಾಡಿಸಲಿ ಎಂದು ದೇವರಲ್ಲಿ ಪ್ರಾರ್ಥಿಸುತ್ತೇನೆ.

**ಪಂ.ರಂಗಾಚಾರ್ಯ ಗುತ್ತಲ**

ಕುಲಪತಿಗಳು ಶ್ರೀಜಯತೀರ್ಥವಿದ್ಯಾಪೀಠ

## ಆಶೀರ್ವಚನ

॥ ಶ್ರೀಶ ಏವ ಶರಣಂ ॥ ಶ್ರೀಗುರುಭ್ಯೋ ನಮಃ॥

ಶ್ರೀಮನ್ಮಧ್ವಾಚಾರ್ಯರು ಹಿರಿದಾದ ಮುಕ್ತಿಗೆ ಮಿಗಿಲಾದ ಸಾಧನೆಗಳನ್ನು ತೋರಿಹರು. ಕರುಣೆಯಿಂದಿತ್ತ ಎಲ್ಲ ಉಪಕರಣಗಳನ್ನು ಹರಿಗೆ ಅಭಿಮುಖಗೊಳಿಸುವಂತೆ ಮಾಡುವುದೇ ಸಾಧನೆಯೆನ್ನುತ್ತಾರೆ ಆಚಾರ್ಯರು.

ಚಿತ್ತಕ್ಕೆ ಆಳವಾದ ಧ್ಯಾನದ ಹರಹು ಸಾಧನ.
ಬುದ್ಧಿಗೆ ಪ್ರಕಾಂಡ ಯುಕ್ತಿವಾದ.
ಭಾವನೆಗೆ ಭಕ್ತಿ ಪ್ರೇಮಗಳು.
ವಾಕ್ ಶಕ್ತಿಗೆ ಮಂತ್ರ ಸ್ತೋತ್ರಗಳು.
ದೇಹದ ಬಲಕ್ಕೆ ಕರ್ಮಯೋಗ.
ಇತ್ಯಾದಿ ಇತ್ಯಾದಿ........

ಪ್ರಕೃತ ದೇವಲೋಕದ ಮಂತ್ರವಾಙ್ಮಯವನ್ನು ಆಚಾರ್ಯರು ತಂತ್ರಸಾರದಲ್ಲಿ ನೀಡಿದರು. ಇವು ಕಲಿಯುಗದಿಂದ ಕುಗ್ಗಿ ಕಮರಿಹೋಗುವ ಭಕ್ತಿಪೂತಸಾತ್ತ್ವಿಕ ಮಾನವರಿಗೆ ಶಕ್ತಿಯುತ ಸಾಧನೆಗಳು.

ಮಂತ್ರಜಪವನ್ನು ಪರಮಶ್ರದ್ಧೆಯಿಂದ ಆಚರಿಸಬೇಕು. ಈ ಮಂತ್ರಗಳ ಜಪದಿಂದ ಹರಿಕರುಣೆ ನಿಶ್ಚಿತ ಎಂದು ನಂಬಿರಬೇಕು. ಈ ಮಂತ್ರಗಳು ಹರಿ ಬ್ರಹ್ಮಾದಿ ದೇವತೆಗಳ ದರುಶನದಿಂದ ಸಿದ್ಧವಾದವುಗಳು. ವೇದಗಳ ಸಾರಭೂತವಾದವುಗಳು. ಅಷ್ಟಮಹಾಮಂತ್ರ-ಗಳಂತೂ ಅನಂತ ವೇದಗಳೇ ಹೆಪ್ಪುಗಟ್ಟಿ ನಿಂತಂತಿವೆ. ತುದಿಮೊದಲಿಲ್ಲದ ಸಾಗರವನ್ನು ಸೂರೆಗೈದು ಒಂದೇ ಬಿಂದುವಿನಲ್ಲಿ ಅಡಗಿಸಿ ತುಂಬಿದಂತಿವೆ.

ಈ ಮಂತ್ರಗಳನ್ನು ಕೋಟಿ ಕೋಟಿ ವಿಷ್ಣುಭಕ್ತರು ತಪಿಸಿ, ಪರಿತಪಿಸಿ ಪಡೆದರು. ಜಪಿಸಿ, ಧೇನಿಸಿ ಸಿದ್ಧರಾದರು. ಆಗಸದ ಅಂಚಿಗೆ ಕೈ ಚಾಚಬಹುದು. ಆದರೆ ಈ ಮಂತ್ರಗಳ ಆಳವನ್ನು ತಿಳಿಯುವದು ಕಷ್ಟ. ಈ ಎಲ್ಲ ಮಂತ್ರಗಳು ದೇವರ ವಾಙ್ಮಯಮೂರ್ತಿ. ಹೀಗೆಲ್ಲ ಭಾವಿಸಿ ಮಂತ್ರದಲ್ಲಿ ಶ್ರದ್ಧೆಯನ್ನು ಇಡಬೇಕು.

ಮಂತ್ರಗಳನ್ನು ಪ್ರತಿದಿನ ಜಪಿಸಬೇಕು. ಮಧ್ಯೆ ಮಧ್ಯೆ ವಿರಾಮವಾದಂತೆ ವೀರ್ಯ ಕುಂದುವದು ನಿಶ್ಚಿತ. ಜಪಿಸುವಾಗ ಅನಾಥ ಪ್ರಜ್ಞೆಯಿರಬೇಕು. ನಾನು ಪರತಂತ್ರ, ದುರ್ಬಲ, ಕ್ಷುದ್ರ, ಪಾಪಿ, ಇಡೀವಿಶ್ವದಲ್ಲೇ ಪಾಮರ ಜಂತು. ದೇವರು ಸ್ವತಂತ್ರ, ಪರಮಶಕ್ತ ಕರುಣಾಮಯ, ಕ್ಷಮಾಸಮುದ್ರ, ನನ್ನ ಪಾಪ ದೋಷಗಳನ್ನು ಭಸ್ಮಗೊಳಿಸುವ ಮಹಾದೊರೆ ಎಂದು ಭಾವಿಸಬೇಕು.

ಅಲ್ಲದೆ ವಿಶಾಲವಾದ ವಿಶ್ವದಲ್ಲಿ ವಿಸ್ತಾರವಾದ ಆಗಸದಲ್ಲಿ ಅಂತರ್ಭಾಹಿರದಲ್ಲಿ ಹಿಂದು ಮುಂದು ಎಡ ಬಲ ಮೇಲು ಕೆಳಗಿನಲ್ಲಿ ಅನಂತ ಅವಯವ ಗುಣಕ್ರಿಯಾಗಳಿಂದ ಸಾಂದ್ರನಾದ ಶ್ರೀಹರಿಯು ಅನಂತರೂಪಗಳಿಂದ ನಿಬಿಡವಾಗಿ ತುಂಬಿಹನು. ಎಲ್ಲವನ್ನು ನಿಯಮಿಸುವನು. ಎಲ್ಲರನ್ನು ಪ್ರೇರಿಸಿ ರಕ್ಷಿಸುವನು. ಆತನ ಅಡಿಯಾಳು ನಾನು ಎಂದು ಅನುಸಂಧಾನ ಮಾಡುತ್ತಲೇ ಜಪಿಸಬೇಕು.

ಇದರೊಡನೆ ಅತ್ಯವಶ್ಯವಾಗಿ ಬೇಕಾಗಿರುವದು ಮಂತ್ರಗಳ ಅರ್ಥಾನುಸಂಧಾನ. "ತಿಳಿವಿನಿಂದ ಕಾಪಾಡುವ" ಕಾರಣವೇ ಮಂತ್ರವೆಂದು ಹೆಸರು. ಕಾರಣ ಮಂತ್ರಗಳ ಅರ್ಥಜ್ಞಾನ ತುಂಬ ಅಗತ್ಯ. ಅದಕ್ಕಾಗಿ ಮಹಾಜ್ಞಾನಿಗಳು ತಪಸ್ವಿಗಳೂ ಆದ ಪಾಂಘ್ರೀ ಶ್ರೀನಿವಾಸಾಚಾರ್ಯರು ಮಂತ್ರ ವ್ಯಾಖ್ಯಾನವನ್ನು ರಚಿಸಿ ಜಪಿಸುವ ಭಕ್ತವರ್ಗಕ್ಕೆ ಅನುಗ್ರಹಿಸಿದ್ದಾರೆ. ಮಂತ್ರಗಳ ವಿಶೇಷವಾಗಿ ವೇದಗಳ ವ್ಯಾಖ್ಯಾನದಲ್ಲಿ ಸಿದ್ಧಹಸ್ತರು ಪರಮಪೂಜ್ಯ ಪಾಂಘ್ರೀ ಶ್ರೀನಿವಾಸಾಚಾರ್ಯರು.

ಶ್ರೀಹರಿ ವಾಯು ದೇವತಾ ಗುರು ಹಿರಿಯರ ಕರುಣೆಯಿಂದ ನಮ್ಮ ಅತ್ಯಂತ ಪ್ರಿಯಶಿಷ್ಯನಾದ ಪಂಡಿತವರೇಣ್ಯ ಕಟ್ಟಿ ನರಸಿಂಹಾಚಾರ್ಯರು ಶ್ರೀಶ್ರೀಸತ್ಯಾತ್ಮತೀರ್ಥ ಶ್ರೀಪಾದಂಗಳವರ ಅಣತೆಯನ್ನು ಅನುಸರಿಸಿ ಹರಿ ವಾಯು ಗುರುಗಳು ಹಾಗೂ ವ್ಯಾಖ್ಯಾನಕಾರರು ಸಂಪ್ರೀತರಾಗುವಂತೆ ಮೂಲ ಗ್ರಂಥವನ್ನು ಅತ್ಯಂತ ಸುಬದ್ಧವಾಗಿ ಸಂಶೋಧಿಸಿ ಕನ್ನಡದಲ್ಲಿ ವ್ಯಾಖ್ಯಾನಿಸಿದ್ದಾರೆ. ಅವರಿಗೆ ಅಸ್ಮದಾರಾಧ್ಯ ಮಾಹುಲೀ ಆಚಾರ್ಯರು ವ್ಯಾಖ್ಯಾನಕಾರರಾದ ಶ್ರೀ ಶ್ರೀ ಪಾಂಘ್ರೀ ಆಚಾರ್ಯರು ಮಹಾಸ್ವಾಮಿಗಳು ಸಕಲ ಗುರು ದೇವತೆಗಳು, ಶ್ರೀಮದಾನಂದತೀರ್ಥರು ಸರ್ವಾಂತರ್ಯಾಮಿ ಮಂತ್ರಮೂರ್ತಿ ಶ್ರೀಹರಿಯು ದೀರ್ಘ ಆಯುರಾರೋಗ್ಯಗಳನ್ನು ಜ್ಞಾನ ಭಕ್ತಿ ವೈರಾಗ್ಯಗಳನ್ನು ಕರುಣಿಸಲೆಂದು ಪ್ರಾರ್ಥಿಸುತ್ತೇವೆ.

ಬ್ರಹ್ಮಾತ್ಮದಾಸ
ಪರಮ ಪೂಜ್ಯ ಮಾಹುಲೀ ಆಚಾರ್ಯರ ಪಾದಪದ್ಮಾರಾಧಕ
ಪಂ. ವಿದ್ಯಾಸಿಂಹಾಚಾರ್ಯ ಮಾಹುಲೀ

ಯರಗೋಳ 16-12-2005

# ಮುನ್ನುಡಿ

ಸಜ್ಜನರ ಉದ್ಧಾರಕ್ಕಾಗಿ ಬ್ರಹ್ಮರುದ್ರೇಂದ್ರಾದಿ ದೇವತೆಗಳಿಂದ ಪ್ರಾರ್ಥಿತನಾಗಿ ಕರುಣಾಸಾಗರನಾದ ಭಗವಂತನು ಶ್ರೀವೇದವ್ಯಾಸರೂಪದಿಂದ ಅವತರಿಸಿ ಮಹಾಭಾರತ, ಹದಿನೆಂಟು ಮಹಾಪುರಾಣ ಹಾಗು ಉಪಪುರಾಣಗಳನ್ನು ರಚಿಸಿ ತದರ್ಥನಿರ್ಣಾಯಕ-ಗಳಾದ ಬ್ರಹ್ಮಸೂತ್ರಗಳನ್ನು ರಚಿಸಿದಂತೆ "ತಂತ್ರಸಾರ"ವೆಂಬ ಶ್ರೇಷ್ಠಗ್ರಂಥವನ್ನು ರಚಿಸಿರುವನು. ಆ ತಂತ್ರಸಾರವನ್ನೇ ಸಂಗ್ರಹಿಸಿ ಶ್ರೀಮದಾನಂದತೀರ್ಥಭಗವತ್ಪಾದಾ-ಚಾರ್ಯರು "ತಂತ್ರಸಾರಸಂಗ್ರಹ"ವೆಂಬ ಶ್ರೇಷ್ಠ ಗ್ರಂಥವನ್ನು ರಚಿಸಿರುವರು. ಆದ್ದರಿಂದಲೇ ಈ ಕೃತಿಗೆ "ತಂತ್ರಸಾರಸಂಗ್ರಹ"ವೆಂಬ ನಾಮವು ಅನ್ವರ್ಥಕವಾಗಿದೆ. ಸುಮಧ್ವವಿಜಯ-ದಲ್ಲಿ ಆಚಾರ್ಯರ ಸಮಗ್ರ ಕೃತಿಗಳ ಸ್ಥೂಲಪರಿಚಯ ಮಾಡಿಕೊಡುವ ಸಂದರ್ಭದಲ್ಲಿ ಶ್ರೀ ನಾರಾಯಣ ಪಂಡಿತಾಚಾರ್ಯರು 'ದೇವತೆಗಳಿಗೆ ತನ್ನ ನೆರಳಲ್ಲಿ ಆಶ್ರಯವನ್ನು ನೀಡಿರುವ ಕಲ್ಪವೃಕ್ಷದಂತಿರುವ ಅತಿಶ್ರೇಷ್ಠವಾದ "ತಂತ್ರಸಾರಸಂಗ್ರಹ"ವನ್ನು ಅಧ್ಯಯನ ಅಧ್ಯಾಪನ- ಮೂಲಕ ಆಶ್ರಯಿಸಿ ಯಾರು ತಾನೇ ಸ್ವಾಪೇಕ್ಷಿತಫಲವನ್ನು ಪಡೆಯಲಾರರು?' ಎಂದು ವರ್ಣಿಸಿದ್ದಾರೆ.

ತಂತ್ರಸಾರಸಂಗ್ರಹದಲ್ಲಿ ಆಚಾರ್ಯರು ಶ್ರವಣ ಮನನಗಳನ್ನು ಆಚರಿಸಿ ಅಥವಾ ಆಚರಿಸುತ್ತಾ ಧ್ಯಾನತತ್ಪರರಾಗುವ ಭಕ್ತರಿಗೆ ಅತ್ಯಾವಶ್ಯಕವಾದ ಮಂತ್ರಗಳನ್ನು ಹಾಗು ಅವುಗಳಿಗೆ ಸಂಬಂಧಪಟ್ಟ ಅಂಗನ್ಯಾಸ, ಕರನ್ಯಾಸ, ಧ್ಯಾನಶ್ಲೋಕಾದಿಗಳನ್ನು ಹೇಳಿದ್ದಾರೆ. ಮತ್ತು ವಾಸ್ತುಶಾಸ್ತ್ರಕ್ಕೆ ಸಂಬಂಧಪಟ್ಟ ವಿಷಯವನ್ನು ಹಾಗು ಪ್ರತಿಮೆಗಳ ನಿರ್ಮಾಣಕ್ಕೆ ಉಪಯುಕ್ತ ಶಿಲಾದಿಗಳ ಸ್ವರೂಪ ಮತ್ತು ಅವುಗಳ ಪ್ರತಿಷ್ಠಾಪನಾ ವಿಧಾನಗಳನ್ನು ತಿಳಿಸಿದ್ದಾರೆ.

ಅಂತಹ ಶ್ರೇಷ್ಠವಾದ "ತಂತ್ರಸಾರಸಂಗ್ರಹ"ವೆಂಬ ಗ್ರಂಥಕ್ಕೆ ಶ್ರೀ ಛಲಾರಿ ಆಚಾರ್ಯರು ಹಾಗು "ಶೇಷಚಂದ್ರಿಕಾಚಾರ್ಯ"ರೆಂದು ಪ್ರಸಿದ್ಧರಾದ ಶ್ರೀವ್ಯಾಸರಾಜಮಠೀಯ ಶ್ರೀರಘುನಾಥತೀರ್ಥರು ಮೊದಲಾದ ಮಹನೀಯರು ಶ್ರೇಷ್ಠ ವ್ಯಾಖ್ಯಾನವನ್ನು ರಚಿಸಿದ್ದಾರೆ.

ವಿವಿಧ ಸಾಂಸಾರಿಕ ದುಃಖಗಳಿಂದ ನೊಂದ ಜೀವರಿಗೆ ಆತ್ಮಶಾಂತಿಗಾಗಿ ಹಾಗು ಭಗವತ್ಪ್ರೀತಿಗಾಗಿ ಜಪಾದಿಗಳ ಅನುಷ್ಠಾನವು ಅತ್ಯಾವಶ್ಯಕವಾಗಿದೆ. ಆ ಜಪಾದಿಗಳು ಫಲಕಾರಿಯಾಗಬೇಕಾದರೆ ಮಂತ್ರಗಳ ಅರ್ಥಾನುಸಂಧಾನವು ಆವಶ್ಯಕ. ಜ್ಞಾನಪೂರ್ವಕ-ವಾದ ಕರ್ಮವೇ ಭಗವತ್ಪ್ರೀತಿಗೆ ಸಾಧನ. ಅತ ಏವ ಜ್ಞಾನಪೂರ್ವಕವಾದ ಕರ್ಮಕ್ಕೆ ಶಾಸ್ತ್ರದಲ್ಲಿ ಪ್ರಾಶಸ್ತ್ಯವನ್ನು ಕೊಟ್ಟಿರುತ್ತಾರೆ.

ಆದ್ದರಿಂದಲೇ ತಂತ್ರಸಾರೋಕ್ತವಾದ ಮಂತ್ರಗಳಿಗೆ ಶ್ರೀ ಪಾಂಘ್ರಿ ಶ್ರೀನಿವಾಸಾಚಾರ್ಯರು "ತಂತ್ರಸಾರೋಕ್ತಮಂತ್ರವ್ಯಾಖ್ಯಾನಂ" ಎಂಬುವುದಾಗಿ ವ್ಯಾಖ್ಯಾನಾತ್ಮಕವಾದ ಗ್ರಂಥವನ್ನು ರಚಿಸಿ ಮಂತ್ರಗಳ ಅರ್ಥಜ್ಞಾನಮಾಡಿಕೊಳ್ಳುವ ಸಾಧಕರಿಗೆ ಮಹೋಪಕಾರಮಾಡಿದ್ದಾರೆ. ಇವರು ತಮ್ಮ ವ್ಯಾಖ್ಯಾನದಲ್ಲಿ ಒಂದೊಂದು ಮಂತ್ರಕ್ಕೂ ಅನೇಕಾರ್ಥಗಳನ್ನು ಪ್ರಮಾಣಪುರಸ್ಸರವಾಗಿ ತಿಳಿಸಿ ಮಂತ್ರಗಳ ಗಾಂಭೀರ್ಯವನ್ನು ಎತ್ತಿ ತೋರಿಸಿದ್ದಾರೆ. ಮತ್ತು ಒಂದು ಮಂತ್ರವಾದ ನಂತರ ಇನ್ನೊಂದು ಮಂತ್ರವನ್ನು ಉಚ್ಚರಿಸುವುದಕ್ಕೆ ಸಮೀಚಿನವಾದ ಸಂಗತಿಯನ್ನು ತೋರಿಸಿದ್ದಾರೆ.

ಪವಮಾನಪಂಚಸೂಕ್ತಗಳಿಗೆ ಹಾಗು ತಂತ್ರಸಾರೋಕ್ತ ಮಂತ್ರಗಳಿಗೆ ವಿಷ್ಣುಸೂಕ್ತಾದಿಗಳಿಗೆ ಮಾಡಿದ ಇವರ ವ್ಯಾಖ್ಯಾನಗಳನ್ನು ಅವಲೋಕಿಸಿದವರಿಗೆ ಇವರ ವೇದವೇದಾಂತ-ನ್ಯಾಯವ್ಯಾಕರಣಶಾಸ್ತ್ರಗಳಲ್ಲಿರುವ ಪಾಂಡಿತ್ಯದ ಪರಿಚಯವಾಗದಿರಲು ಶಕ್ಯವಿಲ್ಲ. ಇವರ ಪಿತೃಪಾದರು ಭೀಮಸೇನಾಚಾರ್ಯರು. ಇವರು ಪುರುಷೋತ್ತಮಾಚಾರ್ಯರೆಂಬ ಶ್ರೇಷ್ಠವಿದ್ವಾಂಸರ ಶಿಷ್ಯರೆಂದು ತಾವೇ ತಮ್ಮ ವ್ಯಾಖ್ಯಾನದಲ್ಲಿ ತಿಳಿಸಿದ್ದಾರೆ. ಇವರು ಶ್ರೀಮದುತ್ತರಾದಿಮಠಾಧೀಶರಾದ ಶ್ರೀ ೧೦೦೮ ಶ್ರೀ ಸತ್ಯಸಂಕಲ್ಪತೀರ್ಥ ಶ್ರೀಪಾದಂಗಳವರ ಸಮಕಾಲೀನರೆಂದು ವರಾಹಮಂತ್ರಕ್ಕೆ ವ್ಯಾಖ್ಯಾನಮಾಡುವ ಸಂದರ್ಭದಲ್ಲಿ 'ಶ್ರೀಮತ್ಸತ್ಯಸಂಕಲ್ಪತೀರ್ಥಶ್ರೀಚರಣೈಃ ಸ್ವಕಂಠರವೇಣ "ದಾದಾಪಯ" ಇತ್ಯೇವ ವಕ್ತವ್ಯಂ ಇತ್ಯುಕ್ತತ್ವಾತ್' ಎಂದು ವ್ಯಾಖ್ಯಾನಮೂಲಕ ತಿಳಿಸಿದ್ದಾರೆ.

ಸಂಸ್ಕೃತವನ್ನರಿಯದ ಭಕ್ತರು ಮಂತ್ರಗಳ ಸಾಮಾನ್ಯ ಪರಿಚಯವನ್ನು ಮಾಡಿಕೊಂಡಾ-ದರೂ ಮಂತ್ರಗಳನ್ನು ಜಪಿಸಿ ತಮ್ಮ ಜೀವನವನ್ನು ಸಾರ್ಥಕಮಾಡಿಕೊಳ್ಳಲಿ ಎಂಬ ಉದಾತ್ತ ದೃಷ್ಟಿಯಿಂದ ದಯಾಘನರಾದ ಶ್ರೀ ೧೦೦೮ ಶ್ರೀಮತ್ಸತ್ಯಾತ್ಮತೀರ್ಥ ಶ್ರೀಪಾದಂಗಳವರು ಈ ವ್ಯಾಖ್ಯಾನವನ್ನು ಸಂಶೋಧಿಸಿ ತದನುಗುಣವಾಗಿ ಪ್ರಾಕೃತಭಾಷೆಯಲ್ಲಿ ಮಂತ್ರಗಳ ಅರ್ಥವನ್ನು ಬರೆಯಲು ಅನುಗ್ರಹಪೂರ್ವಕವಾಗಿ ಮಂತ್ರಾಕ್ಷತೆ ಹಾಗು ಪುಸ್ತಕವನ್ನು ಕೊಟ್ಟು ಆಜ್ಞಾಪಿಸಿದರು. ಆದರೆ ನಾನೊಬ್ಬ ಲೇಖಕನೂ ಅಲ್ಲ. ಸಂಶೋಧಕನೂ ಅಲ್ಲ. ಆದರೂ ನನ್ನ ಉದ್ಧಾರಕ್ಕಾಗಿ ಮಾಡಿದ ಶ್ರೀಪಾದಂಗಳವರ ಆಜ್ಞೆಯನ್ನು ಅತಿಕ್ರಮಿಸಬಾರದು ಎಂಬ ಒಂದೇ ಉದ್ದೇಶದಿಂದ ಒಪ್ಪಿಕೊಳ್ಳಬೇಕಾಯಿತು. ಆದರೆ ಸಮಯವೂ ಬಹಳ ವಿರಲಿಲ್ಲ. ಆದರೂ ಶ್ರೀಪಾದಂಗಳವರು ಹಾಗು ಸ್ವರೂಪೋದ್ಧಾರಕ ವಿದ್ಯಾಗುರುಗಳು ಇವರೇ ಸ್ವಾನುಗ್ರಾಹ್ಯತಾಸಂಬಂಧೇನ ನನ್ನ ಅಂತರ್ಯಾಮಿಗಳಾಗಿದ್ದು ಈ ಸೇವೆಯನ್ನು ನನ್ನಿಂದ ಮಾಡಿಸಿ ಶ್ರೀಹರಿಗೆ ಸಮರ್ಪಿಸುತ್ತಾರೆ ಎಂಬ ವಿಶ್ವಾಸದಿಂದ ಕಾರ್ಯದಲ್ಲಿ ಪ್ರವೃತ್ತನಾದ ನನಗೆ ಸ್ವಾಮಿಗಳೇ ತಮ್ಮ ಪ್ರವಚನದಲ್ಲಿ ಪದೇ ಪದೇ ಉಪದೇಶಿಸುತ್ತಿದ್ದ "ಕ್ಷೇಮಂ ವಿಧಾಸ್ಯತಿ ಸ ನೋ ಭಗವಾಂಸ್ತ್ರ್ಯಧೀಶಃ" ಎಂಬ ಅಮೃತವಾಣಿಯು ಮಧ್ಯದಲ್ಲಿ ಧೈರ್ಯಕೊಡುತ್ತಿತ್ತು.

ಪ್ರಕೃತದಲ್ಲಿ ಈ ಕೃತಿಯು ತಮ್ಮೆಲ್ಲರ ಕಣ್ಣು ಮುಂದೆ ಕಾಣುವುದಕ್ಕೆ ಈ ಉಭಯರ ಪರಮಾನುಗ್ರಹವೇ ಮುಖ್ಯ ಕಾರಣ.

ಈ ಸಂದರ್ಭದಲ್ಲಿ ಪ್ರಾತಃಸ್ಮರಣೀಯರಾದ ಶ್ರೀ ೧೦೦೮ ಶ್ರೀಸತ್ಯಪ್ರಮೋದತೀರ್ಥ ಶ್ರೀಪಾದಂಗಳವರ ಪರಮಾನುಗ್ರಹವನ್ನು ಸ್ಮರಿಸುವುದು ನನ್ನ ಕರ್ತವ್ಯ. ಒಮ್ಮೆ ಶ್ರೀಪಾದಂಗಳವರು ಮುಂಬೈಗೆ ದಿಗ್ವಿಜಯ ಮಾಡಿದಾಗ ಧೈರ್ಯಮಾಡಿ ಸ್ವಾಮಿಗಳವರ ಸನ್ನಿಧಿಗೆ ಹೋಗಿ ೮ವರ್ಷದಿಂದಲೇ ನನಗಿದ್ದ "ಅಪಸ್ಮಾರ"(ಫಿಟ್ಸ)ರೋಗವನ್ನು ಪರಿಹರಿಸಲು ಪ್ರಾರ್ಥಿಸಿದಾಗ ಈ ಬಾಲಕನ ಪ್ರಾರ್ಥನೆಗೆ ಕರಳು ಕರಗಿ ಪರಮಾನುಗ್ರಹಮಾಡಿ "ಧನ್ವಂತರಿ" ಮಂತ್ರವನ್ನು ಉಪದೇಶಿಸಿ ನನ್ನ ರೋಗವನ್ನು ಪರಿಹರಿಸಿ ಶ್ರೀ ಪಂ. ಪ.ಪೂಜ್ಯ ಗುತ್ತಲಾಚಾರ್ಯರ ಇಚ್ಛೆಯಂತೆ ತಮ್ಮ ದಿವ್ಯ ಸನ್ನಿಧಾನದಲ್ಲಿ ಆಶ್ರಯ ನೀಡಿ ಉದ್ಧರಿಸಿದ್ದಾರೆ.

ಅಧುನಾ ವಿರಾಜಮಾನರಾದ ಶ್ರೀಪಾದಂಗಳವರೂ ಸಹ ಅನ್ನ ಪಚನವಾಗದೇ ಅನಾರೋಗ್ಯದಿಂದ ಬಳಲುತ್ತಿದ್ದ ನನಗೆ ಶ್ರೀರಾಮದೇವರಿಗೆ ಅಭಿಷೇಕಮಾಡಿದ ಜೇನು ತುಪ್ಪವನ್ನು ಕೊಟ್ಟು ಉದ್ಧರಿಸಿದ್ದಾರೆ.

ಉಭಯ ಶ್ರೀಪಾದಂಗಳವರ ಪರಮಾನುಗ್ರಹವು ನನ್ನ ಮೇಲೆ ಯಾವಾಗಲೂ ಇರಲೆಂದು ಪ್ರಾರ್ಥಿಸುತ್ತಾ ಅನಂತ ಭಕ್ತಿಶ್ರದ್ಧಾಪೂರ್ವಕ ದೀರ್ಘದಂಡಪ್ರಣಾಮಗಳನ್ನು ಸಮರ್ಪಿಸುತ್ತೇನೆ.

ಎಲ್ಲವಿಧದಿಂದಲೂ ಅತ್ಯಂತದರಿದ್ರನಾದ ನನ್ನನ್ನು ತಮ್ಮ ಛತ್ರ ಛಾಯೆಯಲ್ಲಿ ಇರಿಸಿಕೊಂಡು ಅನ್ನ ವಸತಿ ವಸ್ತ್ರಗಳನ್ನೀಯುವುದಲ್ಲದೆ ನನ್ನ ಅಪರಾಧಗಳನ್ನು ಲೆಕ್ಕಿಸದೇ ಅಪಾರಮಾತೃವಾತ್ಸಲ್ಯ, ಅಂತಃಕರಣವನ್ನು ತೋರಿ ಸಾಕಿ ಸಲಹಿ ಸ್ಫೂರ್ತಿ ನೀಡಿ ಹಗಲಿರಳೆನ್ನದೇ ನನ್ನಂಥ ನೂರಾರು ವಿದ್ಯಾರ್ಥಿಗಳಿಗೆ ಅಖಂಡಪಾಠವನ್ನು ಹೇಳಿ ಉದ್ಧರಿಸುತ್ತಿರುವ ಸ್ವರೂಪೋದ್ಧಾರಕ ವಿದ್ಯಾಗುರುಗಳ (ಶ್ರೀ ಪಂ. ಪ. ಪೂ. ವಿದ್ಯಾಸಿಂಹಾಚಾರ್ಯರ) ಪರಮಾನುಗ್ರಹವನ್ನು ವರ್ಣಿಸಲು ಶಬ್ದದಿಂದ ದರಿದ್ರನಾಗಿದ್ದೇನೆ.

ಜಪ-ತಪ ಪಾಠಪ್ರವಚನಾದ್ಯನುಷ್ಠಾನಗಳಿಂದ ಪರಮಾತ್ಮನ ಪೂರ್ಣಾಧಿಷ್ಠಾನರಾಗಿ ತಮ್ಮ ಜನ್ಮದ ಸಫಲತೆಯನ್ನು ಕಂಡುಕೊಂಡು ನಮ್ಮೆಲ್ಲ ಶಿಷ್ಯರಿಗೂ "ಕಾಲೋಽಯ-ಮೀರಸುತಶಾಸ್ತ್ರವಿಚಾರಹೀನಃ" ಎಂಬ ಅಮೃತೋಪದೇಶವನ್ನು ಮಾಡುತ್ತಾ ಮಂತ್ರೋಪದೇಶವನ್ನು ಮಾಡಿ ಉದ್ಧರಿಸುತ್ತಿರುವ ಪಂ.ಪ.ಪೂ.ವಿದ್ಯಾಗುರುಗಳಿಗೆ ನನ್ನ ಅನಂತ ಜನ್ಮದ ಭಕ್ತಿಶ್ರದ್ಧಾಪೂರ್ವಕ ದೀರ್ಘದಂಡಪ್ರಣಾಮಗಳು. ಅವರ ಪರಮಾನುಗ್ರಹ ರಕ್ಷಾಕವಚವು ಯಾವಾಗಲೂ ನಮ್ಮನ್ನು ಸಂರಕ್ಷಿಸುತ್ತಿರಲೆಂದು ಪ್ರಾರ್ಥಿಸುತ್ತೇನೆ.

ನನ್ನ ಸ್ವರೂಪೋದ್ಧಾರಕಗುರುಗಳಂತೆ ನನ್ನ ಮೇಲೆ ಅಪಾರ ಪ್ರೀತಿ, ವಾತ್ಸಲ್ಯ ಅಂತಃಕರಣವನ್ನು ತೋರುತ್ತಿರುವ ಹಾಗು ನನ್ನನ್ನು ಶ್ರೀಜಯತೀರ್ಥವಿದ್ಯಾಪೀಠಕ್ಕೆ ಕರೆಸಿಕೊಂಡು ಪ್ರಾಧ್ಯಾಪಕವೃತ್ತಿಯನ್ನು ನೀಡಿ ಜೀವನಕ್ಕೆ ದಾರಿಮಾಡಿಕೊಟ್ಟ ವಿದ್ಯಾರ್ಥಿವತ್ಸಲರಾದ ವಿದ್ಯಾಪಕ್ಷಪಾತಿಗಳಾದ ಜಯತೀರ್ಥವಿದ್ಯಾಪೀಠದ ಕುಲಪತಿಗಳಾದ ಶ್ರೀ ಪಂ.ಪೂ.ಗುತ್ತಲಾಚಾರ್ಯರಿಗೂ (ರಂಗಾಚಾರ್ಯರಿಗೂ) ಭಕ್ತಿಶ್ರದ್ಧಾಪೂರ್ವಕ ಅನಂತ ದೀರ್ಘದಂಡಪ್ರಣಾಮಗಳು.

ತಲೆತಲಾಂತರಗಳಿಂದ ಕಡುಬಡತನದ ಮನೆತನದಲ್ಲಿ ಬಂದರೂ "ಬಡತನವು ಬರಲದೇ ಭಗವದ್ಭಜನೆಯೋಗ" ಎಂಬ ಅನುಸಂಧಾನವುಳ್ಳವರಾಗಿ ತಮ್ಮಂತೆ ಮಕ್ಕಳಿಗೂ ಅದೇ ಅನುಸಂಧಾನವನ್ನು ಹುಟ್ಟಿಸಿ ಶುದ್ಧವೈದಿಕಮಾರ್ಗದಲ್ಲಿ ನಮ್ಮನ್ನು ಮುನ್ನಡೆಸಿಕೊಂಡು ಆಶೀರ್ವದಿಸುತ್ತಿರುವ ಪ.ಪೂ.ಮಾತಾಪಿತೃಗಳಿಗೆ (ವೇ.ಶ್ರೀ ಬಂಡಾಚಾರ್ಯ ಹಾಗೂ ಕು.ಸೌ ಜಾನಕೀಬಾಯಿ) ಭಕ್ತಿಶ್ರದ್ಧಾಪೂರ್ವಕ ಶಿ.ಸಾ.ನಮಸ್ಕಾರಗಳು.

ಪ್ರಾತಃಸ್ಮರಣೀಯರಾದ ಶ್ರೀಮಹಾಸ್ವಾಮಿಗಳ ಮಹಾಸಮಾರಾಧನಾದಿನವೇ (೪-೧೧-೨೦೦೫) ಸಂಶೋಧಿಸಿ ಬರೆದು ಮುಗಿಸಿದ ಈ ಕೃತಿಯನ್ನು ಅಂದೇ ಸಂಕಲ್ಪಿಸಿದಂತೆ ಅವರ ಅಡಿದಾವರೆಗಳಲ್ಲಿ ಹಾಗು ವಿದ್ಯಾಗುರುಗಳ ಅಂತರ್ಯಾಮಿಗಳಾಗಿದ್ದು ಎಲ್ಲ ಶಿಷ್ಯರನ್ನು ಅನುಗ್ರಹಿಸುತ್ತಿರುವ ಪ್ರಾತಃಸ್ಮರಣೀಯ ಪ.ಪೂ.ಪರಮಗುರುಗಳಾದ ಶ್ರೀ ಮಾಹುಲಿ ಪರಮಾಚಾರ್ಯರ (ಗೋಪಾಲಾಚಾರ್ಯರ) ಅಡಿದಾವರೆಗಳಲ್ಲಿ ಸಮರ್ಪಿಸುತ್ತೇನೆ.

ನಿರಂತರ ಪಾಠಪ್ರವಚನ ಸಾವಿರಾರು ಭಕ್ತವೃಂದಕ್ಕೆ ತಪ್ತಮುದ್ರಾಧಾರಣೆ ಇತ್ಯಾದಿ ಲೋಕೋದ್ಧಾರಕ ಕಾರ್ಯಕಲಾಪಗಳಿದ್ದರೂ ನನ್ನ ಮೇಲೆ ಅನುಗ್ರಹಿಸಿ "ಅನುಗ್ರಹ ಸಂದೇಶ"ವನ್ನು ನೀಡಿದ ಶ್ರೀಪಾದಂಗಳವರಿಗೆ ಭಕ್ತಿಶ್ರದ್ಧಾಪೂರ್ವಕ ಅನಂತ ಜನ್ಮದ ದೀರ್ಘದಂಡಪ್ರಣಾಮಗಳು.

ಹಾಗೆಯೇ ಆಶೀರ್ವಚನವನ್ನು ನೀಡಿ ಆಶೀರ್ವದಿಸಿದ ಪಂ. ಪ. ಪೂ. ಜಯತೀರ್ಥವಿದ್ಯಾಪೀಠದ ಕುಲಪತಿಗಳಾದ ಗುತ್ತಲಾಚಾರ್ಯರವರಿಗೆ ನನ್ನ ಅನಂತ ದೀರ್ಘದಂಡಪ್ರಣಾಮಗಳು.

ಹಾಗೆಯೇ ನಿರಂತರ ಪಾಠಪ್ರವಚನಾದಿಕಾರ್ಯಕಲಾಪಗಳಿದ್ದರೂ ಶಿಷ್ಯನಾದ ನನ್ನ ಮೇಲೆ ಅಪಾರಕರುಣೆಯನ್ನು ತೋರಿ ಸಮಯಾವಕಾಶವನ್ನು ಮಾಡಿಕೊಂಡು ಆಶೀರ್ವಚನವನ್ನು ನೀಡಿ ಅನುಗ್ರಹಿಸಿದ ಶ್ರೀ ಸತ್ಯಧ್ಯಾನವಿದ್ಯಾಪೀಠದ ಕುಲಪತಿಗಳಾದ ಪಂ.ಪ.ಪೂ. ಶ್ರೀ ಗುರುಪಾದರಿಗೆ (ವಿದ್ಯಾಸಿಂಹಾಚಾರ್ಯರಿಗೆ) ನನ್ನ ಅನಂತ ದೀರ್ಘದಂಡಪ್ರಣಾಮಗಳು.

ಈ ಸಂಶೋಧನಾ ಕಾರ್ಯದಲ್ಲಿ ತಮ್ಮ ಕಾರ್ಯಕಲಾಪಗಳನ್ನು ಬದಿಗಿಟ್ಟು ನನ್ನ ವಿಜ್ಞಾಪನೆಯನ್ನು ಮನ್ನಿಸಿ ಪರಿಪೂರ್ಣಸಹಕಾರವನ್ನು ನೀಡಿ ಈ ಕೃತಿ ಹೊರಬರುವುದಕ್ಕೆ ಪ್ರಧಾನಕಾರಣರಾದ ನನ್ನ ಅಧ್ಯಾತ್ಮಬಂಧುಗಳಾದ ಪಂ. ವಾದಿರಾಜಾಚಾರ್ಯ ಕರಣಂ, ಹಾಗು ಪಂ. ವೇಂಕಟೇಶಾಚಾರ್ಯ ಬಿ.ಆರ್, ಮತ್ತು ಪಂ.ಮಹಿದಾಸಾಚಾರ್ಯ ಜೋಶಿ ಇವರಿಗೆ ನನ್ನ ಹೃತ್ಪೂರ್ವಕ ಕೃತಜ್ಞತೆಗಳು.

ನನ್ನ ಎಲ್ಲ ಧಾರ್ಮಿಕ ಕಾರ್ಯಗಳಲ್ಲಿ ಸಹಭಾಗಿಯಾಗಿದ್ದು ತನ್ನ ಆಚಾರವಿಚಾರಗಳಿಂದ ಶ್ರೀಪಾದಂಗಳವರ ಹಾಗು ಗುರುಗಳ ಪೂರ್ಣಾನುಗ್ರಹಕ್ಕೆ ಪಾತ್ರರಾದ ನನ್ನ ಪ್ರಿಯಭ್ರಾತೃ. ಪಂ. ಸಮೀರಾಚಾರ್ಯ ಕಟ್ಟಿ ಇವರು ಎಲ್ಲ ಕನ್ನಡ ಅನುವಾದವನ್ನು ಪರಿಶೀಲಿಸಿ ಸಹಕರಿಸಿದ್ದಾರೆ. ಇವರಿಗೆ ಶ್ರೀ ಹರಿವಾಯುಗುರುಗಳು ಇತೋಽಪ್ಯಧಿಕಜ್ಞಾನಭಕ್ತಿ-ವೈರಾಗ್ಯಗಳನ್ನು ದಯಪಾಲಿಸಲೆಂದು ಪ್ರಾರ್ಥಿಸುತ್ತೇನೆ.

ನನ್ನ ಕನ್ನಡಾನುವಾದವನ್ನು ಗಣಕಯಂತ್ರದಲ್ಲಿ ಸೇರಿಸಿ ತನ್ನ ನಡೆನುಡಿಗಳಿಂದ ಶ್ರೀಪಾದಂಗಳವರ ಪೂರ್ಣಾನುಗ್ರಹಕ್ಕೆ ಪಾತ್ರನಾದ ಶ್ರೀ ಜಯತೀರ್ಥವಿದ್ಯಾಪೀಠದ ವಿದ್ಯಾರ್ಥಿ ಚಿ॥ಪವನ ಹುನಗುಂದ ಈತನಿಗೆ ಶಾಸ್ತ್ರದಲ್ಲಿ ಇತೋಽಪ್ಯಧಿಕವಾದ ನಿಷ್ಠೆ ಹರಿಗುರುಗಳಲ್ಲಿ ಶ್ರದ್ಧಾಭಕ್ತಿಗಳನ್ನು ಶ್ರೀಪಾದಂಗಳವರು ಕರುಣಿಸಲೆಂದು ಪ್ರಾರ್ಥಿಸುತ್ತೇನೆ.

ಮಾಧ್ವಸಂಘದ ಸುವರ್ಣಮಹೋತ್ಸವದ ಈ ಸುಸಂದರ್ಭದಲ್ಲಿ ಸ್ಮರಣಸಂಚಿಕಾದಿ-ಗಳಿಗೆ ಧನವನ್ನು ಉಪಯೋಗಿಸದೇ ಕೇವಲ ಅಪ್ರಕಟಿತವಾದ ಗ್ರಂಥಗಳ ಪ್ರಕಾಶನವಾಗುವ ಉದ್ದೇಶದಿಂದ ಈ ಗ್ರಂಥದ ಪ್ರಕಾಶನಕ್ಕೆ ವಿಶೇಷ ಧನಸಹಾಯಮಾಡಿದ ಹರಿಹರದ ಮಾಧ್ವಸಂಘದ ಎಲ್ಲ ಪದಾಧಿಕಾರಿಗಳಿಗೆ ಹರಿವಾಯುಗುರುಗಳು ಇತೋಽಪ್ಯಧಿಕವಾದ ಶಾಸ್ತ್ರದಲ್ಲಿ ನಿಷ್ಠೆ ಹಾಗು ಜ್ಞಾನಭಕ್ತಿವೈರಾಗ್ಯಾದಿಗಳನ್ನು ಕರುಣಿಸಲೆಂದು ಪ್ರಾರ್ಥಿಸುತ್ತೇನೆ.

ಈಗಾಗಲೇ ಶ್ರೀ ಶ್ರೀಪಾದಂಗಳವರಿಂದ ಸಂಸ್ಥಾಪಿತವಾದ "ವಿಶ್ವಮಧ್ವಮಹಾಪರಿಷತ್" ಎಂಬ ಸಂಸ್ಥೆಯಿಂದ ನೂರಾರು ಅತಿಪ್ರಾಚೀನವಾದ ಅಪ್ರಕಟಿತವಾದ ಗ್ರಂಥಗಳನ್ನು ಪ್ರಕಾಶನಗೊಳಿಸಿ ಶ್ರೀಪಾದಂಗಳವರ ಆಜ್ಞೆಯಂತೆ ಈ ಗ್ರಂಥವನ್ನೂ ಪ್ರಕಾಶನಗೊಳಿಸು-ತ್ತಿರುವ ಎಲ್ಲ ಪದಾಧಿಕಾರಿಗಳಿಗೆ, ಹಾಗೂ ಸುಂದರವಾಗಿ ಮುದ್ರಿಸಿಕೊಟ್ಟ ವಾಗರ್ಥ ಪ್ರಿಂಟಿಂಗ್ ಪ್ರೆಸ್ ಅವರಿಗೂ ನಾನು ಆಭಾರಿಯಾಗಿದ್ದೇನೆ.

ಇಲ್ಲಿ ಹೇಳಿದ ಮಂತ್ರಗಳ ಅರ್ಥಾನುಸಂಧಾನಪೂರ್ವಕ ಜಪಮಾಡುವ ಭಾಗ್ಯವನ್ನು ನನಗೂ ಹಾಗೂ ಎಲ್ಲ ಸದ್ಭಕ್ತರಿಗೂ ಶ್ರೀ ಹರಿವಾಯುಗುರುಗಳು ಕರುಣಿಸಲೆಂದು ಪ್ರಾರ್ಥಿಸುತ್ತೇನೆ.

ಶ್ರೀಚರಣಗುರುಚರಣಚರಣರಜೋಭಿಷೇಕಾಭಿಲಾಷೀ
ನರಸಿಂಹಾಚಾರ್ಯ ಬಿಂಡಾಚಾರ್ಯ ಕಟ್ಟಿ (ಇಂಗಳೇಶ್ವರ)

## ಗ್ರಂಥಕರ್ತೃಗಳ ಪರಿಚಯ

ಪಾಂಫ್ರಿ ಶ್ರೀನಿವಾಸಾಚಾರ್ಯರ ತಂದೆ ಜಮದಗ್ನಿಗೋತ್ರದ ಭೀಮಾಚಾರ್ಯರು. ಇವರು ಶ್ರೇಷ್ಠ ವಿದ್ವಾಂಸರು. ಅನೇಕ ಗ್ರಂಥಗಳನ್ನು ರಚಿಸಿದ್ದಾರೆ. ತಾಯಿ ರಾಧಾಬಾಯಿ. ಶ್ರೀನಿವಾಸಾಚಾರ್ಯರು ನಾಂದೇಡಗ್ರಾಮದಲ್ಲಿ ಜನಿಸಿದರು. ಬಾಲ್ಯದಲ್ಲಿಯೇ ಪಿತೃವಿಯೋಗವಾಯಿತು. ಕೆಲವು ಕಾಲವಾದನಂತರ ತಾಯಿಯ ಆಜ್ಞೆಯಂತೆ ಗೋದಾವರೀತೀರದಲ್ಲಿರುವ ರಾಹೇರ ಗ್ರಾಮದಲ್ಲಿ ತಮ್ಮ ಕುಲದೇವತೆಯಾದ ಶ್ರೀನರಸಿಂಹದೇವರನ್ನು ತಮ್ಮ ಆರೋಗ್ಯಪ್ರಾಪ್ತಿಗಾಗಿ ನಾಲ್ವತ್ತು ದಿನಗಳಪರ್ಯಂತ ತಪಸ್ಸಿನಿಂದ ಸೇವಿಸಿದರು. ಇವರ ತಪಸ್ಸಿನಿಂದ ಸಂತುಷ್ಟನಾದ ನರಹರಿಯ ಪ್ರೇರಣೆಯಿಂದ ಶ್ರೀ ನಾರದರು ಆಗಮಿಸಿ ದರ್ಶನವಿತ್ತು ಶ್ರೀನರಸಿಂಹಮಂತ್ರವನ್ನು ಉಪದೇಶಿಸಿ ಇವರನ್ನು ಅಪಮೃತ್ಯುವಿನಿಂದ ಪಾರುಮಾಡಿ ಅನುಗ್ರಹಿಸಿದರು.

ಇವರು ಮಾತೆಯ ಆಜ್ಞೆಯಂತೆ ತಮ್ಮ ಗ್ರಾಮದ ಸಮೀಪದಲ್ಲಿದ್ದ ಮುದ್ಗಲಗೋತ್ರಜರಾದ ಶ್ರೀ. ಪುರುಷೋತ್ತಮಾಚಾರ್ಯರೆಂಬ ಶ್ರೇಷ್ಠಜ್ಞಾನಿಗಳ ಶಿಷ್ಯತ್ವವನ್ನು ವಹಿಸಿ ಅಲ್ಪಕಾಲದಲ್ಲಿಯೇ ತಮ್ಮ ಅಗಾಧಪಾಂಡಿತ್ಯ, ವಿನಯಾದಿ ಸದ್ಗುಣಗಳಿಂದ ಗುರುಗಳ ವಿಶೇಷಾನುಗ್ರಹಕ್ಕೆ ಪಾತ್ರರಾದರು.

ಇವರು ಮಹಾಮಹಿಮರು. ತಪಶ್ಶಕ್ತಿಯಿಂದ ವೃಷ್ಟಿಯನ್ನು ತರಿಸಿ ಭಕ್ತರ ಸಂಕಷ್ಟಗಳನ್ನು ದೂರಮಾಡಿದ್ದಾರೆ. ಇವರ ಅದ್ಭುತ ಪಾಂಡಿತ್ಯ, ತಪಃಶಕ್ತಿ ವಿನಯ, ಪರೋಪಕಾರಬುದ್ಧಿ ಇವೇ ಮೊದಲಾದ ಸದ್ಗುಣಗಳನ್ನು ಕಂಡು ಪರಮಸಂತುಷ್ಟರಾಗಿ ಉತ್ತರಾದಿಮಠಾಧೀಶರಾದ ಶ್ರೀ ೧೦೦೮ ಶ್ರೀಮತ್ಸತ್ಯಸಂಕಲ್ಪತೀರ್ಥರು ಶಾಲು, ಶಾಟಿ, ಹಗಲುದೀಪ, ಛತ್ರ-ಚಾಮರಾದಿಗಳನ್ನು ನೀಡುವಮೂಲಕ ಗೌರವಿಸಿದ್ದಾರೆ.

ಶ್ರೀ ಬೋಗಾಪುರೇಶ ಪ್ರಾಣದೇವರನ್ನು ದ್ರವ್ಯದ ಸಲುವಾಗಿ ಕಳ್ಳರು ಭಂಗಮಾಡಿ ಒಂದು ಗಿಡದ ಕೆಳಗೆ ಆ ಶಿಲೆಯ ಚೂರುಗಳನ್ನು ಎಸೆದಾಗ ಇವರ ಅಗಾಧ ಮಹಿಮೆಯನ್ನು ಕೇಳಿ ಹಚ್ಚೋಳಿ ಕೃಷ್ಣರಾಯರು ತಮ್ಮ ಕುಲದೇವರಾದ ಬೋಗಾಪುರೇಶನ ಪುನಃ ಪ್ರತಿಷ್ಠಾಪನೆಗಾಗಿ ಇವರನ್ನು ಪ್ರಾರ್ಥಿಸಿದರು. ಇವರು ೧೮೨೫ ಇಸ್ವಿ(ಶಕೆ ೧೭೪೭) ಚೈತ್ರ ಶುದ್ಧ ಪ್ರತಿಪದಾ ಸುಮೂಹೂರ್ತದಲ್ಲಿ ಆ ಭಂಗಮಾಡಿದ ಮೂರ್ತಿಯ ಶಕಲಗಳನ್ನು ದೇವರ ಗರ್ಭಾಲಯದಲ್ಲಿ ಇಟ್ಟು ಮಧು ಮತ್ತು ಗೋಘೃತಾದಿಗಳನ್ನು ಇಟ್ಟು ಆ ಗರ್ಭಗುಡಿಯ ಬಾಗಿಲನ್ನು ಮುಚ್ಚಿ ಗರ್ಭಗುಡಿಯ ಹೊರಗೆ ಪವಮಾನ ಬೃಹತೀಸಹಸ್ರ, ಸರ್ವಮೂಲ, ವೇದೋಪನಿಷತ್ತುಗಳ ಪಾರಾಯಣ ಹೋಮ, ಬ್ರಾಹ್ಮಣರ ಭೋಜನಾದಿಗಳನ್ನು

ಮಾಡಿಸುತ್ತ ಹತ್ತನೆ ದಿನದಂದು ಪುನಃಪ್ರತಿಷ್ಠಾಪನೆ ಮಾಡುವ ಸಂಕಲ್ಪವನ್ನು ಮಾಡಿದರು. ಆದರೆ ಅರ್ಚಕರು ಮಧ್ಯದಲ್ಲಿ ಗಡಿಬಿಡಿಯಿಂದ ಏಳನೆಯ ದಿವಸ ಗರ್ಭಗುಡಿಯ ಬಾಗಿಲನ್ನು ತೆಗೆದರು. ಆಗ ಆ ಶಿಲಾಶಕಲಗಳ ಸಂಧಾನವು ಪೂರ್ಣವಾಗಿರಲಿಲ್ಲ. ಮುಂದೆ ಅಷ್ಟಕ್ಕೇ ನಿಂತು ಹೋಯಿತು. ಇದು ಭಗವಂತನ ಸಂಕಲ್ಪವೆಂದು ಅರಿತು ಅಂದೇ ಚೈತ್ರ ಶುದ್ಧ ಸಪ್ತಮೀದಿವಸ ಪುನಃ ಪ್ರಾಣಪ್ರತಿಷ್ಠಾಪನೆಯನ್ನು ಮಾಡಿದರು. ಆ ಮೂರ್ತಿಯ ಶಿಲಾಶಕಲಸಂಧಾನವು ಈಗಲೂ ಪ್ರತ್ಯೇಕ ಕಾಣುವುದು.

ಮಾಧ್ವಮಹಾಗ್ರಂಥಗಳ ಪಾಠಪ್ರವಚನ, ಆತಿಥಿಸತ್ಕಾರ, ತೀರ್ಥಕ್ಷೇತ್ರಗಳ ಸಂಚಾರ, ಶರಣು ಬಂದ ಭಕ್ತರ ಭೂತ-ಪಿಶಾಚಾದಿಗಳ ಬಾಧಾಪರಿಹಾರ, ರೋಗ ದಾರಿದ್ರ್ಯ ಭಯ ಇವುಗಳ ಪರಿಹಾರ, ಗೃಹದಾನ, ಆಯುರ್ದಾನ, ಸಂತತಿಪ್ರದಾನಾದಿಗಳನ್ನು ಮಾಡಿ ತಮ್ಮ ಜೀವನವನ್ನು ಸಾರ್ಥಕೀಕರಿಸಿಕೊಂಡ ಮಹಾತ್ಮರು ಇವರು.

**ಇವರು ರಚಿಸಿದ ಗ್ರಂಥಗಳು**

೧.ಸಂಧ್ಯಾಭಾಷ್ಯ ೨. ವಿಷ್ಣುಸಹಸ್ರನಾಮಭಾಷ್ಯ ೩. ಭೇದಬೀಜ ೪. ತತ್ತ್ವಬೋಧ ೫. ಆಹ್ನಿಕಪದ್ಧತಿ ೬. ಆಹ್ನಿಕಚಂದ್ರಿಕಾ ೭. ನಾರದಸ್ತವನ(ಟೀಕಾಸಹಿತ) ೮. ತಂತ್ರಸಾರೋಕ್ತ ಮಂತ್ರವ್ಯಾಖ್ಯಾನ ೯. ಶಿಕ್ಷಾರಾಮಾಯಣ ೧೦.ಕ್ಷಯಮಾಸ ಸಾಧನ ೧೧. ಗೀತಾ ತ್ರಿವಿಧಾರ್ಥವಿವೃತಿ ೧೨. ವಿಷ್ಣುಪಂಚಕನಿರ್ಣಯ ೧೩. ಶಾಂಡಿಲ್ಯ ತತ್ತ್ವಟೀಕಾ ೧೪. ಭಾಗವತವಿರೋಧೋದ್ಧಾರ ೧೫. ದ್ವಾದಶಸ್ತೋತ್ರಟೀಕಾ ೧೬. ಜೈಮಿನೀಅಶ್ವಮೇಧಟೀಕಾ ೧೭. ಆರ್ಯಸಿದ್ಧಾಂತಸಂಗ್ರಹ ೧೮. ಬ್ರಹ್ಮಸೂತ್ರನಾಮಾವಳಿ ೧೯. ಸೂತ್ರಭಾಷ್ಯಾರ್ಥ ೨೦. ಮಾನಸಪೂಜಾ ಪದ್ಧತಿ ಇವೇ ಮೊದಲಾದವುಗಳು.

# ಮಾಧ್ವಸಂಘ - ಹರಿಹರಕ್ಷೇತ್ರ

ಶ್ರೀ ಹರಿಹರೇಶ್ವರನ ದಿವ್ಯಸಾನ್ನಿಧ್ಯವುಳ್ಳ, ನಯನ ಮನೋಹರವಾದ ಉತ್ತರವಾಹಿನಿಯಾದ ತುಂಗಭದ್ರೆಯ ತೀರ. ಗುಹನೆಂಬ ರಾಕ್ಷಸನನ್ನು ಸಂಹರಿಸಿರುವ ಕಾರಣದಿಂದ ಅನೇಕ ಪುರಾಣಗಳಲ್ಲಿ 'ಗುಹಾರಣ್ಯ'ವೆಂದು ಪ್ರಖ್ಯಾತವಾದ ಹರಿಹರಕ್ಷೇತ್ರವು 'ದಕ್ಷಿಣಕಾಶಿ' ಎನ್ನುವ ಅನ್ವರ್ಥನಾಮ ಹೊಂದಿದೆ. ಬ್ರಹ್ಮತೀರ್ಥ, ಭಾರ್ಗವತೀರ್ಥ, ನೃಸಿಂಹತೀರ್ಥ, ಅಗ್ನಿತೀರ್ಥ, ಗಾಲವತೀರ್ಥ, ಚಕ್ರತೀರ್ಥ, ರುದ್ರಪಾದತೀರ್ಥ, ಪಾಪನಾಶನ ತೀರ್ಥ, ಪಿಶಾಚಮೋಚನ ತೀರ್ಥ, ಋಣಮೋಚನತೀರ್ಥ ಮತ್ತು ವಟಚ್ಛಾಯಾತೀರ್ಥ-ಗಳಿಂದ ಸಂಯುತವಾದ ತುಂಗಭದ್ರೆಯಲ್ಲಿಯ ಸಂಕಲ್ಪಪೂರ್ವಕವಾದ ಅವಗಾಹನಸ್ನಾನ, ತೀರ್ಥಪಾದನ ತೀರ್ಥಪ್ರಾಪ್ತಿಗೆ ಪ್ರಮುಖ ಸೋಪಾನವೆಂದು ಪುರಾಣಗಳು ಕೊಂಡಾಡುತ್ತಿವೆ. ಇಂದ್ರದೇವರು, ಯಮದೇವರು ಈ ಕ್ಷೇತ್ರವನ್ನು, ಕ್ಷೇತ್ರದೇವತೆಯನ್ನೂ ಸ್ತೋತ್ರ ಮಾಡಿದ್ದಾರೆ. ವಶಿಷ್ಠ ಭಾರದ್ವಾಜ, ಉಪಮನ್ಯು ಮೊದಲಾದ ಮಹರ್ಷಿಗಳು ತಪಗೈದ ಪ್ರದೇಶವಿದು.

ಪ್ರಾತಸ್ಮರಣೀಯರಾದ ಶ್ರೀವಾದಿರಾಜತೀರ್ಥರು ಹರಿಹರೇಶ್ವರನನ್ನು ಸೇವಿಸಿ ಸ್ತೋತ್ರವನ್ನು ನಮಗೆ ಅನುಗ್ರಹಿಸಿದ್ದಾರೆ. ಪ್ರಸಿದ್ಧ ಗ್ರಂಥಕಾರರಾದ, ಪರಿಮಳಾಚಾರ್ಯರ ವಿಶೇಷ ಅನುಗ್ರಹಕ್ಕೆ ಪಾತ್ರರಾದ ಬಿದರಹಳ್ಳಿ ಶ್ರೀ ಶ್ರೀನಿವಾಸತೀರ್ಥರು ಅನೇಕ ವರ್ಷ ಇಲ್ಲಿ ಜ್ಞಾನಯಜ್ಞವನ್ನು ಮಾಡಿದ್ದಾರೆ. ಶ್ರೀಪಾಪನಾಶನತೀರ್ಥರ ತಪೋಭೂಮಿ ಇದು. ಪುರಂದರದಾಸರು, ವಿಜಯದಾಸರು, ಕನಕದಾಸರು, ಹೆಳವನಕಟ್ಟೆ ಗಿರಿಯಮ್ಮ ಇವರೇ ಮೊದಲಾದ ದಾಸಶ್ರೇಷ್ಠರು ಈ ಕ್ಷೇತ್ರವನ್ನು ಕೊಂಡಾಡಿದ್ದಾರೆ.

ಸನಾತನ ಪರಂಪರೆಯ ಇಂತಹ ಪುಣ್ಯತಮ ಕ್ಷೇತ್ರದಲ್ಲಿ ಪ್ರಾತಸ್ಮರಣೀಯರಾದ ಶ್ರೀ ೧೦೦೮ ಶ್ರೀ ಸತ್ಯಪ್ರಮೋದತೀರ್ಥ ಶ್ರೀಪಾದಂಗಳವರ ಆದೇಶ ಮತ್ತು ಮಂತ್ರಾಕ್ಷತೆಯಿಂದ ಅನುಗ್ರಹೀತರಾದ ಶ್ರೀಹೃಷೀಕೇಶತೀರ್ಥರು (ರಾಣೇಬೆನ್ನೂರು) ಶ್ರೀವ್ಯಾಸರಾಜರಿಂದ ಪ್ರತಿಷ್ಠಾಪಿತವಾದ ಪೇಟೆಯ ಆಂಜನೇಯದೇವಸ್ಥಾನದಲ್ಲಿ (ಪೇಟೆ ಬ್ರಾಹ್ಮಣರ ಬೀದಿ) ಮಾಧ್ವಸಂಘದ ಅಂಕುರಾರ್ಪಣೆಯನ್ನು ಮಾಡಿದರು. ಶ್ರೀ ಶ್ರೀಮತ್ ಸತ್ಯಪ್ರಮೋದತೀರ್ಥ ಶ್ರೀಪಾದಂಗಳವರಲ್ಲಿ ಶ್ರೀಮನ್ನ್ಯಾಯಸುಧೆಯನ್ನು ಅಧ್ಯಯನ ಮಾಡಿದ ಪ್ರಥಮ ನಾಲ್ಕು ಶಿಷ್ಯರಲ್ಲಿ ಒಬ್ಬರಾದ ಪಂ. ಶ್ರೀ ಶಿಂಗನಮಲ್ಲಿ ಮಧ್ವಾಚಾರ್ಯರು, ಶ್ರೀ ಟಿ. ಹನುಮಂತಾಚಾರ್ಯರು, ಶ್ರೀ ಪೇಟೆ ರಾಮಚಂದ್ರಾಚಾರ್ಯರು ಮೊದಲಾದವರ ನೇತೃತ್ವದಲ್ಲಿ ಸನಾತನ ತತ್ತ್ವಜ್ಞಾನದ ಪ್ರಸಾರ ಮುಂದುವರೆಯಿತು.

ಶ್ರೀ ಸುಂಕದ ಶೇಷಗಿರಿರಾಯರ ಉದಾರದಾನದಿಂದಾಗಿ ಶ್ರೀಯುತರಾದ ಹೊನ್ನತ್ತಿ ರಾಮರಾಯರು, ಎಂ. ಕೇಶವಮೂರ್ತಿಗಳು, ಕೆ.ಬಿಂದುಮಾಧವಾಚಾರ್ಯರು, ಸಿ. ಆರ್. ಶ್ರೀಧರಮೂರ್ತಿಗಳು, ಮಧ್ವಾಚಾರ್ಯ ಪುರೋಹಿತ, ಎಸ್. ಪ್ರಹ್ಲಾದರಾಯರು ಹಾಗೂ ಅನೇಕ ಮಾಧ್ವ ಪ್ರಮುಖರ, ಸಹಾಯ ಸಹಕಾರದಿಂದ ಈಗಿರುವ ''ಮಾಧ್ವಸಂಘ'' ತನ್ನ

ಕಟ್ಟಡವನ್ನು ಹೊಂದಿತು. ಶ್ರೀ ಶ್ರೀಮತ್ ಸತ್ಯಪ್ರಮೋದತೀರ್ಥರ ಮಾರ್ಗದರ್ಶನವನ್ನು ಪುನಃ ಪುನಃ ಸಕಲ ಮಾಧ್ವರು ಸಂಸ್ಮರಿಸುತ್ತಾರೆ. ಅಂತೆಯೇ ಅವರ ಅಣತಿಯಂತೆ ಪೂಜ್ಯ ಪಂಡಿತ ಕಟ್ಟಿ ಶ್ರೀಮಾಧವೇಶಾಚಾರ್ಯರು ತತ್ತ್ವಜ್ಞಾನದ ಪ್ರಸಾರಕ್ಕಾಗಿ ಕಟ್ಟಡವನ್ನು ಉದ್ಘಾಟಿಸಿದರು. (೧೯೭೧)

ಶ್ರೀಮದುತ್ತರಾದಿಮಠಾಧೀಶರು, ಶ್ರೀಪಲಿಮಾರು ಭಂಡಾರಕೇರೆ ಮಠಾಧೀಶರು, ಪೇಜಾವರ ಮಠಾಧೀಶರೇ ಮೊದಲಾದ ಉಡುಪಿಯ ಅಷ್ಟಮಠಾಧೀಶರು, ಶ್ರೀಶ್ರೀವ್ಯಾಸರಾಜ ಮಠಾಧೀಶರು, ಶ್ರೀಶ್ರೀರಾಘವೇಂದ್ರ ಮಠಾಧೀಶರು, ಶ್ರೀಶ್ರೀಕೂಡ್ಲಿ ಅಕ್ಷೋಭ್ಯತೀರ್ಥರ ಮಠಾಧೀಶರು ಪುನಃ ಪುನಃ ಈ ಮಾಧ್ವಸಂಘದಲ್ಲಿ ದಿಗ್ವಿಜಯ ಮಾಡಿ ಮಾಧ್ವವೃಂದವನ್ನು ಅನುಗ್ರಹಿಸಿ ಮಾರ್ಗದರ್ಶನ ಮಾಡಿದ್ದಾರೆ.

ಪೂಜ್ಯ ಪಂಡಿತರಾದ ಶ್ರೀ ಮಾಹುಲಿ ಗೋಪಾಲಾಚಾರ್ಯರು. ಶ್ರೀ ಜಾಲಿಹಾಳ ಶ್ರೀನಿವಾಸಾಚಾರ್ಯರು, ಶ್ರೀ ಕಟ್ಟಿ ಕೇಶವಾಚಾರ್ಯರು, ಶ್ರೀಮಾಧವೇಶಾಚಾರ್ಯರು, ಶ್ರೀ ಘೂಳಿ ಕೃಷ್ಣಮೂರ್ತ್ಯಾಚಾರ್ಯರು, ಶ್ರೀ ಗಲಗಲಿ ಶುಕಾಚಾರ್ಯರು, ಶ್ರೀ ಗಲಗಲಿ ಪಂಢರೀನಾಥಾಚಾರ್ಯರು, ಶ್ರೀ ಕಡೂರು ಕೃಷ್ಣಮೂರ್ತ್ಯಾಚಾರ್ಯರು ಇವರೇ ಮೊದಲಾದ ಅನೇಕ ವಿದ್ವನ್ಮಣಿಗಳ ತತ್ತ್ವಸುಧೆಯ ಸಿಂಚನದಿಂದ ಹರಿಹರದ ಮಾಧ್ವಜನರು ಪುನೀತರಾಗಿದ್ದಾರೆ.

ಶ್ರೀಮನ್ಮಧ್ವನವಮೀ, ಶ್ರೀಮಟ್ಟೀಕಾಕೃತ್ಪಾದರ, ಶ್ರೀವ್ಯಾಸರಾಜರ ಮತ್ತು ಶ್ರೀವಾದಿರಾಜತೀರ್ಥರ ಆರಾಧನೆಗಳಲ್ಲದೇ ಶ್ರೀ ಪುರಂದರದಾಸರೇ ಮೊದಲಾದವರ ಆರಾಧನೆಗಳು ಸಕಲ ವೈಭವದಿಂದ ನೆರವೇರುತ್ತವೆ. ಉಪಾಕರ್ಮ, ಪಿತೃಪಕ್ಷಗಳೇ ಮೊದಲಾದ ನಿತ್ಯ ನೈಮಿತ್ತಿಕ ಕರ್ಮಾಚರಣೆಯಿಂದ ಪರಮಾತ್ಮನ ಸೇವೆಯನ್ನು ಹಿರಿಯರ ಮಾರ್ಗದರ್ಶನದಲ್ಲಿ ಆಚರಿಸಲಾಗುತ್ತಿದೆ.

"ಸ್ವೋಚಿತ ಕರ್ಮಾಚರಣೆ ಮತ್ತು ತತ್ತ್ವಜ್ಞಾನ ಇವೇ ತಾರಕ" ಎನ್ನುವ ಪ್ರಾತಸ್ಮರಣೀಯರಾದ ಶ್ರೀ ೧೦೦೮ ಶ್ರೀಮತ್ ಸತ್ಯಪ್ರಮೋದತೀರ್ಥ ಶ್ರೀಪಾದಂಗಳವರ ಅನುಗ್ರಹ ಪೂರ್ವಕವಾದ ಅಮೃತವಾಣಿಯನ್ನು ನಾವು ಸರ್ವದಾ ಸ್ಮರಿಸುತ್ತೇವೆ. ಈ ಮಹಾತ್ಮರ ಮುಖ್ಯ ಪ್ರತಿಮೆಯಾದ ಜ್ಞಾನವೈರಾಗ್ಯಗಳಲ್ಲಿ ಪ್ರಬರ್ಹರಾದ ಶ್ರೀ ೧೦೦೮ ಶ್ರೀಸತ್ಯಾತ್ಮತೀರ್ಥ ಶ್ರೀಪಾದಂಗಳವರ ಮಾರ್ಗದರ್ಶನವನ್ನು ಅವರ ಅನುಗ್ರಹವನ್ನೂ ಸಾಷ್ಟಾಂಗ ಪ್ರಣಾಮಪೂರ್ವಕವಾಗಿ ಸಕಲ ಮಾಧ್ವವೃಂದವೂ ಪ್ರಾರ್ಥಿಸುತ್ತದೆ.

ಸಜ್ಜನವಿಧೇಯ
ಶ್ರೀ ವರದಾಚಾರ್ಯ ಪುರೋಹಿತ
ಮಾಧ್ವಸಂಘ, ಹರಿಹರ.

# विषयानुक्रमणिका

।। श्रीदिग्विजयरामो विजयते ।।

।। श्रीगुरुभ्यो नमः ।। श्रीमल्लक्ष्मीनृसिंहाय नमः ।।

# श्रीतन्त्रसारोक्तमन्त्रव्याख्यानम्

## (पाङ्गी. श्रीनिवासाचार्यविरचितम्)

श्रीनृसिंहं सर्वमन्त्रप्रतिपाद्यं रमाश्रयम् ।
ब्रह्मेरवाग्भारतीशमुखवन्द्यं नमाम्यहम् ।।१।।

श्रीनारदं विधिसुतं सुकुमारीपतिं गुरुम् ।
ध्रुवप्रह्लादमुख्यानां वन्दे सत्तत्त्वदर्शिनम् ।।२।।

श्रीमदानन्दतीर्थानां मुखपद्मविनिस्सृते ।
तन्त्रसारे स्थितान्मन्त्रान्व्याख्यास्ये तदनुग्रहात् ।।३।।

अथ कदाचिद्भारतीरमणो गौतमशापजाज्ञानेन सीदत्सु सत्सु कृपालुभिः ब्रह्माद्यैः प्रार्थितेन भगवता व्यासात्मनाऽवतीर्य सन्मोक्षार्थं वेदार्थज्ञाननिश्चय-कृतब्रह्ममीमांसाशास्त्रस्य मायावाद्यादिभिः कृतापव्याख्यानैः पुनः सिद्धान्त-मजानत्सु दयावशाद्भगवताऽऽज्ञप्तो ब्रह्मणाऽनुमतो व्यहिभूतपाद्यैः प्रार्थितः संस्तत्र सद्भाष्यादीन्कृत्वा तदर्थज्ञाननिमित्तभगवत्प्रसादसाधनजपादिसिद्ध्यै नारायणोक्ततन्त्रसारस्थानेकमन्त्रसद्भावेऽपि तत्सारभूतस्वकृततन्त्रसारे कलौ दृष्टवीर्यान्मन्त्रान्सङ्केतेन वक्तुकाम आदौ महामन्त्रान्वदंस्तथा ''सर्वा वागोङ्कारेण सन्तृण्णा'' इत्युक्तेः सर्ववागाश्रयत्वात्,

''ओङ्कारश्चाथशब्दश्च द्वावेतौ ब्रह्मणः पुरा ।
कण्ठं भित्त्वा विनिर्यातौ तस्मान्माङ्गलिकावुभौ''।।

इत्युक्तेः माङ्गलिकत्वात्, वर्णात्मकशब्दसृष्टौ प्रथमोत्पन्नत्वाच्च तत्रापि प्रथमं प्रणवमन्त्रमेव उपन्यस्तवान् ॥ ओमिति ॥

**१ प्रणवमन्त्रः**

॥ ॐ ॐ ॐ ॥

अत्र आद्यन्तस्थोङ्कारद्वयसाहित्येन ओङ्कारत्रयरूपो मन्त्रः । आद्यन्तस्थयोरूहस्तु स्रवणशीरणनिवृत्त्यर्थम् । उक्तञ्च

**''ब्रह्मणः प्रणवं कुर्यादादावन्ते च सर्वदा ।**
**स्रवत्यनोङ्कृतं ब्रह्म परस्ताच्च विशीर्यते'' ॥ इति ।**

तस्मादकारोकारमकारनादबिन्दुघोषशान्तातिशान्तरूपाष्टवर्णात्मकत्वेऽपि लोकप्रसिद्ध्याऽयमेकाक्षरो मन्त्रः । अवति रक्षति, प्रविशति वा जगद्वा गुणानिति ॐ । जगत्पालकत्वं विष्णुविषयं प्रसिद्धमेव । ''ओतत्ववाची ह्योङ्कारो वक्त्यसौ तद्गुणोतताम्''इत्यनुव्याख्याने । अथवा अधिका उच्चाः मशब्दवाच्याः गुणाः यस्येति । ''ॐनामा भगवान्विष्णुरधिकोच्चगुणत्वतः''इति तैत्तिरीयभाष्ये । यद्वा आपयति विषयानिति अः, आदिमत्त्वाद्वा अः । उत्कर्षति देहाभिमानादिति उः, निद्राविषयानुभवरुपोभयकारणत्वाद्वा उः । मापयति स्वात्मनि जीवमन्तर्गमयतीति मः, जीवज्ञानलयवत्त्वाद्वा मः । तदेतत्त्रिविधगुणयुक्तः ॐ । ''अकारः प्रथमा मात्रा आप्तेरादिमत्त्वाद्वा । उकारो द्वितीया मात्रा उत्कर्षादुभयत्वाद्वा । मकारस्तृतीया मात्रा मितेरपीतेर्वा'' इति माण्डूकश्रुतेः ।

**''श्रुतस्स विष्णुरोङ्कार ॐमित्याक्रियते यतः ।**
**आद्यस्तदंशो ह्याप्तिःस्याद्विषयानापयेयतः ।**

**जीवस्य तु यतः प्राज्ञात्तैजसाद्वा समुत्थितः ।**
**अविभागोऽपि भगवानादिमाँस्तेन कीर्तितः ॥**

देहाभिमानादुद्धृत्य कर्षति स्वप्नमण्डले ।
उत्कर्षत्वं ततस्तस्य निद्राया विषयस्य च ॥

उभयोः कारणत्वेन ह्युभयस्तैजसः स्मृतः ।
स्वात्मन्यन्तर्गमयति मानमन्तर्गतिः स्मृता ।
जीवमन्तर्गतं कृत्वा तज्ज्ञानलयकृद्यतः ॥'' इति ब्रह्मतर्के च ।

अथवा ऊञतेऽस्मिन्जगदिति ॐ । 'ऊञ् तन्तुसन्ताने' । ''ओतमस्मिन्-जगद्यस्मादोमित्युक्तो हरिः सदा'' इति मान्यसंहितायाम् । उत वा सर्वातिशयितः । ''ॐकारोऽतिशये'' इति सूत्रात् । किं वा अः आनन्दरूपः उः उत्कृष्टरूपश्चेति मीयते ज्ञायते स तथा ।

''आनन्दत्वादनामासावुत्कृष्टत्वादुनामकः ।
एतन्नामद्वयं विष्णोर्ज्ञात्वा पापैः प्रमुच्यते ॥'' इति स्कान्दे ।

'मा ज्ञाने' । पृषोदरादित्वान्निरुक्तत्वाद्वा साधुः । आहोस्वित् अः स्वयं वासुदेवः, उः शङ्करस्थ उनामकः, मः ब्रह्मस्थो मनामा तदेतत्त्रिविधरूपः । ''अः इति ब्रह्म''इति ऐतरेयश्रुतिः । ''अकारो वासुदेवः स्यात्''इत्येकाक्षरश्च । ''उकारः शङ्करः प्रोक्तः''इति च । ''मश्शिवश्चन्द्रमा वेधाः''इति च ।

''ब्रह्मस्थो ब्रह्मनामाऽसौ रुद्रस्थो रुद्रनामकः ।
तयोरपि नियन्तैकः स्वयमेव जनार्दनः''॥ इति च स्कान्दे ।

''सर्वदेवेष्वपि हरिः सर्वदेवनियामकः ।
नामवान्सर्वदेवानां सर्वपूजां तथाऽत्त्यसौ ''॥ इति भागवततात्पर्ये ।

अपि वा अत्तीति अः । अद भक्षणे । अत्तेः अ इत्यादेशः अन्त्यलोपो वा निरुक्तत्वात् । अवतीति उः । 'अव रक्षणे' क्विप् । ''ज्वरत्वर...''इत्यूठ् । माति निर्माति जानाति वेति मः । 'मा निर्माणे' । 'मा ज्ञाने' ।

''एकः पुरस्ताद्य इदं बभूव यतो बभूव भुवनस्य गोपाः ।
यमप्येति भुवनं साम्पराये स नो हरिर्घृतमिहायुपेऽत्तु देवः''॥ इति श्रुतेः ।

"स्रष्टा पाता तथैवात्ता निखिलस्यैक एव तु ।
वासुदेवः परः पुंसामितरेऽल्पस्य वा न वा"॥ इति स्कान्दे ।

वा त्रिकालातीतः । तथा च माण्डूक्यश्रुतिः "ॐ इत्येतदक्षरमिदं सर्वं तस्योप व्याख्यानं भूतं भवद्भविष्यदिति"इति ।

"भाविभूतभवत्कालेष्वेकरूपतया हरिः ।
सर्वदा नित्य इत्येषा व्याख्योङ्कारस्य कीर्तिता"॥ इति बृहत्संहितायाम् ।

आशब्दवाच्यो ब्रह्मा, उशब्दवाच्यो रुद्रः तौ माति निर्मातीति वा । 'मा निर्माणे' । धातुलोपो निरुक्तत्वात् । "आकारस्तु पितामहः" "उकारः शङ्करः प्रोक्त" इति चैकाक्षरः । "यस्य प्रसादजो ब्रह्मा रुद्रः क्रोधसमुद्भवः"इति वचनात् । अथवा ॐशब्दवाच्यः । "ॐमिति ब्रह्म"इति श्रुतेः । "वाचकः प्रणवो मम"इति च तन्त्रसारे । अन्ये च बहवोऽर्थाः सन्ति ग्रन्थबाहुल्यभियैवो-परम्यते । "अव रक्षणकान्तिगतिप्रीतितृप्त्यवगमप्रवेशश्रवणस्वाम्यर्थयाचन-क्रियेच्छादीप्त्यालिङ्गनहिंसादानभागवृद्धिषु" इति भीमसेनधातुपाठात् । अत्र कर्तरि कर्मणि वा विग्रहो यथायोग्यतया ज्ञातव्यः । "अवतेष्टिलोपश्च"इति सूत्रेण अव इति स्थिते "अर्तिस्तुसुहुसृघृक्षिक्षुभायावापदीयक्षिनीभ्यो मन्" इत्यनेन मन्प्रत्यये टिलोपे च कृते अव म इति स्थिते "ज्वरत्वरस्रिव्यविमवा-मुपधायाश्च"इति अकारवकारयोर्द्वयोः ऊठि कृते सवर्णदीर्घे कृते "सार्वधातुकार्धधातुकयोः"इति गुणे "नेड्वशि कृति"इति इडागमाभावे च ॐ इति रूपं निष्पद्यते ॥ १॥

२.नारायणमन्त्रः

प्रणवान्तर्गताष्टाक्षराभिव्यक्ताष्टाक्षरत्वाद्व्याहतिवासुदेवादिमन्त्रतो मात्राक्षरै-रल्पत्वाच्च द्वितीयत्वेनाभिहितो नारायणमन्त्रः ॥ ॐ नम इति ॥

॥ ॐ ॐ नमो नारायणाय ॐ ॥

अत्रापि आद्यन्तयोरोङ्कारस्य ऊहो ज्ञातव्यः । एवमग्रे सर्वमन्त्रेष्वपि बोध्यम् ।

ॐशब्द उक्तार्थः । हे ॐ गुणपूर्ण ! हे नमः नम्यते इति नमः तत्संबुद्धावपि नमः । "[१] नमो नम्यतो नित्यं"इति यजुस्संहितायाम् । हे नारायणाय नारायणेति चतुरक्षरशब्दं आयाति वाचकत्वेन प्राप्नोतीति नारायणायः तत्सम्बुद्धौ हे नारायणायेति ।

> **"न तु नारायणादीनां नाम्नामन्यत्र सम्भवः ।**
> **सर्वनाम्नां गतिर्विष्णुरेक एव प्रकीर्तितः"॥ इति वामने ।**

**स्कान्दे च -**

> **"ऋते नारायणादीनि नामानि पुरुषोत्तमः ।**
> **प्रादादन्यत्र भगवान्राजेवर्ते स्वकं पुरम्"॥ इति ।**

अथवा ॐगुणपूर्णाय नारायणाय नारायणनाम्ने नमो नमस्कारः 'अस्तु' इति शेषः ।

ननु ॐनारायणशब्दयोः गुणपूर्णत्वरूपैकार्थत्वेन पुनरुक्तिप्रसङ्गात् विशेषणस्य वैय्यर्थ्यमिति न शङ्कनीयम् । 'विशिष्टवाचकानां पदानां विशेषणपदसमवधाने विशेष्यमात्रपरत्वम्'इति न्यायेन अत्रत्यनारायणशब्दस्य रूढ्या केवलविष्णुरूपार्थकत्वस्वीकारेण ॐशब्दस्य तद्गुणपूर्णाभिधानेन अपौनरुक्त्यात् । यथा 'स कीचकैः'इत्यादि । ननु विशेषणमतिव्याप्त्यादिपरिहारार्थत्वेन सार्थकम् । अत्र च नारायणशब्दस्यैव अन्यत्रायोगेन तदभावात् कथं विशेषणसार्थक्यम् । न च वाच्यं "तप्यमानाय सलिले"इति भारतस्थवाक्येन उदस्थानत्वरूपार्थवाचकनारायणशब्दस्य रुद्रेऽपि सम्भवात् तद्व्यावृत्त्यर्थं विशेषणमिति । नारायणशब्दस्य योगार्थत्वेन रुद्रविषयकत्वे रुढ्यभावेन णत्वाभावप्रसङ्गात् । "पूर्वपदात्संज्ञायामगः" इति णत्वसाधकं सूत्रम् । न 'अट्कुप्वाङ्नुम्व्यवायेऽपि' इति असमानपदत्वात् इति । सत्यं तथाऽपि गोपीषु कृष्णजातापत्यानां संज्ञयैव नारायणशब्दवाच्यत्वेन तेष्वतिव्याप्तिनिरासार्थं सार्थक्योपपत्तिः । प्रसिद्धमिदं महाभारततात्पर्यनिर्णये । अपि वा नारायणाय विष्णवे । नमः वन्दनं । ॐ वाढं अङ्गीकरोमीत्यर्थः ।

---

१. 'भावप्रधानो निर्देशः' इति न्यायेन 'नम्यतः' इत्यस्य नम्यत्वतः इत्यर्थः ।

## अथ नारायणशब्दनिरुक्तिः

अराः दोषाः तद्विरुद्धाः नाराः गुणाः तेषामयनमाश्रयः । ल्युटष्टित्करणसामर्थ्यादयनशब्दोऽत्राधिकरणे त्रिलिङ्गः । उक्तं च अनुव्याख्याने

**''दोषारच्छिद्रशब्दानां पर्यायत्वं यतस्ततः ।**
**गुणा नारा इति ज्ञेयास्तद्वान्नारायणः स्मृतः''इति ।**

'अमानोनाः प्रतिषेधे'इति गणपठितनसमासोऽयम् ।

यद्वा अरायणो दोषाश्रयो न भवतीति स तथा ।

अथवा न रीयते न क्षीयते स नरो भगवान् । 'रीङ् क्षये' इति धातोः तस्माद्भवाः नाराः आपः ता अयनं स्थानं यस्येति । उक्तं च व्यासस्मृतौ

**''आपो नारा इति प्रोक्ता आपो वै नरसूनवः ।**
**अयनं तस्य ताः पूर्वं तेन नारायणस्स्मृतः''॥ इति ।**

अथवा नराणां समूहो नारं तस्मै अयेन शुभावहविधिना णं सुखं यस्मात् इति । ''पुण्येन पुण्यं नयति''इति श्रुतेः । 'अयः शुभावहो विधिः' इत्यभिधानं च ।

यद्वा नरः शेषः स एव अयनं निद्रास्थानं यस्येति स एव नारायणः । स्वार्थे अण् ।

नारं शेषसम्बन्धि अयनं यस्येति वा ।

नरः धर्मपुत्रः शेषावतारः तेन सह अयनं गमनं यस्य । स्वार्थे अण् । ''तुर्ये धर्मकलासर्गे नरनारायणावृषी''(१.३.९) इत्यादि भागवते इति वा ।

नरोऽहिंस्यो जीवः 'रीष् हिंसायां' ततो डः । ''नैनं छिन्दन्ति शस्त्राणि'' इत्यादि गीतासु । तस्येदं नारं शरीरं तत् अयनं प्रवेशस्थानं यस्य । ''महो देवो मर्त्याँ आविवेश''इति श्रुतेः ।

यद्वा रलयोरभेदात् नालस्य पद्मवृन्तस्य अयनं आश्रयः पद्मनाभ इत्यर्थः ।

अथवा नरसम्बन्धित्वात्, न रीयते अनेनेति वा, न अरमणं(दुःखं) येनेतिवा, न दोषा येनेति वा, निर्दोषवेदोत्पन्नत्वाद्वा नारं ज्ञानं विषयतया तदाश्रयत्वान्नारायणः ।

किं वा अरविधुरत्वात्, अरतिविरहितत्वाद्वा, क्षयरहितत्वाद्वा नारा मुक्ताः तदाश्रयः ।

आहोस्वित् नराणामधिपतिर्नारो मुख्यवायुः परमप्रेमास्पदत्वेन सः अयनं यस्य तदाश्रय इति वा । ''यः प्राणे तिष्ठन्''इति श्रुतेः । ''उद्यद्रविप्रकरसन्निभमच्युताङ्के स्वासीनम्''इत्यादि प्राणध्यानप्रस्तावे । ''प्राणः परस्यां देवतायाम्''इति च ।

उत वा न आ स्वतः लाति परिवर्ततेऽसौ नारा जडप्रकृतिः तदभिमानिनी चित्प्रकृतिर्वा । रलयोरभेदः । 'ला परिवर्तने' ततो नपूर्वात् कः (कप्रत्ययः) । स्त्रियां टाप् । तदाश्रयः ।

यद्वा नाराय मुक्तसमुदायाय णं सुखं यस्मात् । अलुक् समासः । ''णश्च निर्वृतिवाचकः''इति वचनात् । ''आनन्ददश्च मुक्तानाम्''इति च ।

अथवा न आ समन्तात् सर्वविषयेष्विति यावत् रमन्ते इति नाराः वीतरागाः तेषामाश्रयः ।

अपि वा नाशरहितत्वाद्वा, विप्रलम्भादिदोषशून्यत्वाद्वा, नरनाम्नो विष्णोरभिव्यक्तत्वाद्वा नारा वेदाः तेषां प्रतिपाद्यत्वेनाश्रयः ।

नाराः वेदाः त एव अयनं मार्गः ज्ञानद्वारा प्राप्तिसाधनं यस्येति वा । 'अयनं वर्त्म मार्गाऽध्वपन्थानः...' इत्यभिधानम् ।

अथवा नरं प्रकृत्य प्रवृत्तत्वान्नारं भारतं तत्प्रतिपाद्यत्वेनाश्रयः ।

''वेदे रामायणे चैव पुराणे भारते तथा ।
आदावन्ते च मध्ये च विष्णुः सर्वत्र गीयते'' ॥ इत्युक्तेः ।

यद्वा नारं दुःखमिश्रत्वादिदोषशून्यं, अयं न याति अपगच्छतीति तथा, णं सुखं तद्रूपत्वात् नारायणः ।

अथवा नारः निर्दोषः अयः शुभावहविधिः येषां ते नारायाः तेषां णो यस्मात् । तेषां णः अन्तर्यामी वा ''णकार आत्मा''इति श्रुतेः ।

नारेण विष्णुसम्बन्धिज्ञानेनैव अयनं मोक्षः यस्मादिति वा । ''तमेवं विद्वानमृत इह भवति नान्यः पन्था अयनाय विद्यते''इति श्रुतेः ।

अथवा नारस्य पुरुषरूपभगवत्समुत्पन्नस्य जगतः पालकत्वेन आश्रयः ।

अथवा रलयोर्यजयोश्चाभेदात् नाले पद्मवृन्ते अजति गच्छति स तथा नारायः ब्रह्मा । 'अज गतिक्षेपणयोः'इति धातुः । ''स इत्थमुद्वीक्ष्य तदब्जनाल नाडीभिरन्तर्जलमाविवेश''इति भागवते । तेन नूयते स्तूयतेऽसाविति । 'णु स्तुतौ' इति धातुः ।

**''वर्णागमो वर्णविपर्ययश्च तथा परौ वर्णविकारनाशौ ।**
**धातोस्तदर्थातिशयेन योगस्तदुच्यते पञ्चविधं निरुक्तम्''॥**

इति महाव्याकरणबलाद्रूपसिद्धिः । नारायः ब्रह्मा तं णयति आनन्दयति स तथा ।

यद्वा न आरे अतिदूरे अन्तिके वा अयनं स्थानं च यस्य । 'आराद्दूरसमीपयोः' इत्यभिधानम् । ''तद्दूरे तद्वन्तिके'' इति श्रुतेः । ''नातिदूरे न चान्तिके''इति स्मृतेश्च ।

अथवा अरं शीघ्रं 'लघु क्षिप्रमरं द्रुतम्'इत्यभिधानात् । तद्विरुद्धत्वान्नारं विलम्बेन अयनं ज्ञानं यस्य । ''बहूनां जन्मनामन्ते ज्ञानवान्''इति गीतासु ।

रलयोरभेदात् अरं अलं पर्याप्तं न भवतीति नारं ऐश्वर्यं तदाश्रयः ।

न आ रायः अतिशयेन धनं येषां ते तथा दरिद्रकल्पा इत्यर्थः । तेभ्यः णः यस्मादिति ।

न रायः धनं येषां ते अरायाः निर्धनाः तद्विरुद्धत्वात् नारायाः सम्पन्नाः तेभ्यो णः यस्मादिति वा ।

अथवा न आ समन्तात् बहिरिति यावत् रः रतिः यस्मिन् स नारः प्रलयकालः । तस्मिन्नपि अयनः विद्यमानः । 'अय गतौ' इति धातुः, ततो ल्युट् । गतशब्दस्य विद्यमानार्थकत्वं 'हृद्गताकाशः' इत्यादौ प्रसिद्धमेव । ''व्यक्ते व्यक्तं कालवेगेन याते भवानेकः शिष्यते शेषसंज्ञः''इत्युक्तेः ।

नाराणि निर्दोषाणि अक्षीणानि वा अयनानि वैकुण्ठश्वेतद्वीपानन्तासनाख्यानि स्थानानि यस्य ।

नालं स्वतः प्रवृत्तिशून्यं असमर्थं वा विश्वं आययति गमयति प्रवर्तयतीति यावत् । अन्तर्णिच् ।

किंवा आ सम्मन्तात् रतिः सुखं यस्य स आरः विष्णुः । तद्भिन्नत्वात् नारं चराचरं जगत् तदयनं स्थानं यस्य । तस्याश्रयो वा ''अन्तर्बहिश्च तत्सर्वं व्याप्य नारायणः स्थितः''इति श्रुतेः ।

नारः अविनाशी निर्दोषो वा अयनः 'जययोरभेदात्' जनविलक्षणः अजन्मा वा स चासौ स चेति ।

'जययोरभेदात्' नारं वायुं आशब्दवाच्यं ब्रह्माणं जनयतीति वा ।

नारं वायुं 'जययोरभेदात्' अयं अजं ब्रह्माणं नयति प्रवर्तयतीति । 'नीञ् प्रापणे' इति धातुः, इकारस्य च अः छान्दसत्वात् ।

नयतीति नः मनोनियन्तृत्वेन सर्वप्रवर्तकत्वात् अनिरुद्धः । आ सर्वान् रमयतीति आरः कामनियन्तृत्वात् प्रद्युम्नः । आ सर्वान् यापयति स्वोदरमिति आयः सर्वोपसंहारकत्वात्सङ्कर्षणः । णयति आनन्दयतीति णः मुक्तिदातृत्वेन वासुदेवः । एवं चतुर्विधरूप इत्यर्थः । इत्यलं बहुना ॥२॥

**३.व्याहृतिमन्त्रः**

प्रणवादभिव्यक्त्याऽष्टाक्षरत्वेन च नारायणमन्त्रसाम्येऽपि अस्य मात्राधिक्यात् तृतीयत्वेनाभिधानम् ॥ **भूरिति ॥**

**ॐ भूः भुवः स्वः भूर्भुवःस्वः ॐ ॥**

भूः भूम्यन्तर्गतः ''पृथिव्यां पृथ्विनामकम्''इति यजुस्संहितायाम् ।

यद्वा भूशब्दवाच्योऽनिरुद्धः ।

**''भूरादिव्याहृतिभिस्तु वाच्यं मूर्तिचतुष्टयम् ।**
**अनिरुद्धादिकं वासुदेवान्तं देहमध्यगम्''॥ इति व्याहृतितत्त्वे ।**

अथवा भूम्यभिमान्यग्निस्थोऽनिरुद्धः ।

**''अनिरुद्धस्तु भूर्नामा हुताशे संव्यवस्थितः''॥ इति ब्रह्मसारे ।**

''भूरिति वा अयं लोकः''इति श्रुतेः इदंशब्दपुल्लिङ्गप्रथमैकवचनविशिष्ट-लोकशब्दवाच्यो वा ।

**''नामप्रवृत्तिहेतुत्वान्नामलोकादिकं हरेः ।**
**अयं समीपस्थतया....................॥'' इति व्याहृतितत्त्वे ।**

''भूरिति वा अग्निः''इति श्रुतेरग्निशब्दवाच्यो वा । ''अग्निरग्रे स्थितत्वाच्च'' इति च ।

''भूरिति वा ऋचः''इति श्रुतेः ऋक्शब्दवाच्यो वा । ''ऋगर्च्यत्वाज्जनार्दनः'' इति ।

''भूरिति प्राणः''इति श्रुतेः प्राणशब्दवाच्यो वा । ''प्रकृष्टनयनात्प्राणः'' इति च ।

स्फूर्तिरूपो वा । ''भूर्नामा स्फूर्तिरूपत्वात्''इति व्याहृतिसारे ।

पूर्णरूपो वा । 'भू बहौ' 'बहुः पूर्णतायाम्'इत्युक्तत्वात् भवतेः क्विपि रूपम् । ''भूमतः''इति हेतूक्तेरनुव्याख्याने । पूर्णार्थत्वकथनात् ऋग्भाष्ये च ।

सर्वाधाररूपो वा । ''गामाविश्य च भूतानि धारयाम्यहमोजसा''इति गीतासु ।

भुवः अन्तरिक्षान्तर्गतः । ''तत्तद्गतस्यैव हरेस्तन्नामादीनि चाञ्जसा'' इति शब्दनिर्णये । ''भुव इत्यन्तरिक्षम्''इति श्रुतिश्च ।

यद्वा भुवश्शब्दवाच्यः प्रद्युम्नः । मा तूक्ता ।

अथवा ''भुव इति वायौ''इति श्रुतेः अन्तरिक्षाभिमानिवायुस्थः प्रद्युम्नः । ''प्रद्युम्नो भगवान्वायौ भुव इत्येव कीर्तितः''इति ब्रह्मसारे ।

''भुव इत्यन्तरिक्षम्''इति श्रुतेः अन्तरिक्षशब्दवाच्यो वा । ''ईक्षणादन्तरिक्षं च''इति व्याहृतितत्त्वे ।

''भुव इति वायुः''इति श्रुतेः वायुसंज्ञो वा । ''वायुर्वयति यज्जगत्''इति च ।

''भुव इति यजूँषि''इति श्रुतेः यजुर्नामा वा । ''यजुर्याज्यस्वरूपत्वात्'' इति च ।

''भुव इत्यपानः''इति श्रुतेः अपानाख्यो वा । ''अपानोऽवाङ्नयनाद्धरिः'' इति च ।

'भू बहौ' इति धातोः भूरि वं वीर्यं यस्येति वा । ''भूरिवीर्यत्वतो भुवः'' इति व्याहृतिसारे ।

भावयति जगदुत्पादयतीति वा । भवतेरेव अन्तर्णीतण्यर्थस्य ''उणादयो बहुलम्''इति बहुलग्रहणात् कप्रत्यये कित्त्वाद्गुणनिषेधे रूपसिद्धिः । ''भावनात्''इति हेतूक्तेः अनुव्याख्याने ।

भूत्या ऐश्वर्येण वर इति वा । महैश्वर्यवानित्यर्थः । भवतेरौणादिको ड प्रत्ययः, वरशब्दान्तलोपश्च निरुक्तत्वात् । ऋग्भाष्ये च भुवश्शब्दस्य भूतिवरार्थत्वेन उक्तत्वात् ।

स्वः स्वर्गान्तर्गतः । ''स्वस्स्थः स्वर्गाभिधो हरिः''इत्युक्तेः ।

यद्वा स्वश्शब्दवाच्यः सङ्कर्षणः व्याहृतितत्त्ववचनात् ।

अथवा ''सुवरित्यादित्ये''इति श्रुतेः स्वरभिमानिसूर्यस्थः सङ्कर्षणः । ''सङ्कर्षणस्सुवर्नामा सूर्ये तिष्ठति केशवः''इति ब्रह्मसारे ।

''सुवरित्यसौलोकः'' इति श्रुतेः असौलोकशब्दवाच्यो वा । उक्त एव लोकशब्दार्थः । ''असौ प्राणे स्थितत्वतः''इति व्याहृतितत्त्वे ।

''सुवरित्यादित्यः''इति श्रुतेः आदित्याह्वो वा । ''आदित्यस्त्वदितेः सुतः''इति च ।

''सुवरिति सामानि''इति श्रुतेः सामवाच्यो वा । ''साम चासौ समत्वतः'' इति च ।

''सुवरिति व्यानः''इति श्रुतेः व्यानाह्वो वा । ''विविधं नयनाद्व्यानः''इति च ।

सु शोभनं वं बलं यस्येति वा । ''सुवः सुबलरूपत्वात्''इति व्याहृतिसारे ।

यद्वा सुखरूपः । ''सुत्त्वात्''इति हेतोरुक्तेरनुव्याख्याने । ''स्वशब्दो हि सुखवाची इति प्रसिद्धः'' इति सुधायाञ्च ।

शोभनं वं सुखं यस्येति वा । अनन्तत्वमेव शोभनत्वम् । ''पूर्णो भूतिवरोऽनन्तसुखो यद्व्याहृतीरितः''इति ऋग्भाष्ये । शब्दस्वभावादव्ययत्वम् ।

स्वशब्दवाच्यो वा । ''परः स्वो हरिरुद्दाम इति नाम चतुष्टयम् । विष्णोः...''इत्यादि प्रकाशिकायाम् ।

स्वतन्त्रो वा । ''स्वतन्त्रत्वात्सुखत्वाच्च स्वनामा विष्णुरुच्यते''इति पाद्मे । स्वकीयो वा, सर्वेषां धनरूपो वा । यतः एवं गुणसम्पन्नोऽतः भूर्भुवः स्वः भूर्भुवस्स्वशब्दवाच्यः ।

अथवा व्याहृतित्रयवाच्यानि अनिरुद्धप्रद्युम्नसङ्कर्षणाख्यानि त्रीणि रूपाणि यतोऽतो भूर्भुवःस्वः त्रिरूपवान् वासुदेवः । अत्र मतुब्लोपः । इत्यलं पल्लवितेन ॥३॥

## ४. वासुदेवमन्त्रः

नारायणाष्टाक्षरेभ्यः व्याहृतिचतुष्टयेभ्यश्च द्वादशाक्षरवासुदेवमन्त्रस्याभिव्यक्तत्वात् नारायणव्याहृतिमन्त्रोक्ताक्षराधिक्याच्च चतुर्थत्वेनोक्तोऽयम् ॥ ॐ नम इति ॥

**॥ ॐ ॐ नमो भगवते वासुदेवाय ॐ ॥**

ॐनमश्शब्दौ उक्तार्थौ ॥ **भगवत इति** ॥ भातीति भः, गच्छतीति गः, वातीति वः, तनोतीति तिः भश्चासौ गश्चासौ वश्चासौ तिश्चेति भगवतिः तत्सम्बुद्धौ हे भगवते । 'भा दीप्तौ' 'गम्लृ गतौ' 'वा गतिगन्धनयोः' 'तनु विस्तारे' इति धातवः । तनोतेरौणादिको डिप्रत्ययः । प्रकाशगतिज्ञानव्याप्तिमन्नित्यर्थः ।

भगं ऐश्वर्यं वान्ति प्राप्नुवन्तीति भगवाः ब्रह्मादयः तांस्तनोति व्याप्नोतीति वा ।

॥ **वासुदेवायेति** ॥ वासुदेवेतिशब्दं आयाति प्राप्नोतीति वासुदेवायः तत्सम्बुद्धौ हे वासुदेवाय ।

बलरूपाद्सुदेवात् प्राणदेवात् न आयातीति स तथेति वा ।

अथवा सर्ववेदबीजप्रतिपाद्याय षड्गुणैश्वर्यवते वासुदेवाय नमः । 'करोमि'इति शेषणान्वयः ।

> **''ऐश्वर्यस्य समग्रस्य वीर्यस्य यशसः श्रियः ।**
> **ज्ञानवैराग्ययोश्चैव षण्णां भगं इतीरणा''॥ इत्युक्तेः ।**
>
> **''भगं श्रीयोनिवीर्येच्छाज्ञानवैराग्यकीर्तिषु ।**
> **माहात्म्यैश्वर्ययत्नेषु धर्मे मोक्षेऽथवा रवौ''॥ इत्युक्तेः ।**

श्रियादिसकलवते इत्यर्थः ।

यद्वा भानि अश्विन्यादिनक्षत्राणि गच्छन्तीति भगाः दस्रादयो देवाः, सूर्यादयो ग्रहा वा । ते विद्यन्ते अधीनत्वेन सन्ति अस्येति तस्मै । ''यदधीनो गुणो यस्य तद्गुणी सोऽभिधीयते''इत्युक्तेः ।

वासुदेवाय वसवश्च देवाश्च तैः विशेषेण गम्यते वासुदेवः तस्मै । ''प्राजापत्यः प्रजापतेः । विशेषेणैव गम्यत्वात्''इतिवत् । तेषामीश्वरो वा । स्वाम्यर्थेऽण् पार्थिवादिवत् ।

यद्वा वाति जानातीति वाः, 'वा गति गन्धनयोः' ततो विच्। सवतीति सुः 'षूङ् प्राणिप्रसवे' ततो डः। दिव्यति क्रीडते स देवः, 'दिवु क्रीडाविजिगीषा व्यवहारद्युतिस्तुतिमोदमदस्वप्नकान्तिगतिषु'इति, ततोऽच्। वाश्चासौ सुश्चासौ देवश्चेति विग्रहः।

अथवा वसति जगतीति वासुः। वसत्यस्मिञ्जगदिति वा। 'वस निवासे' तत उण्। वासुश्चासौ देवश्चेति।

अथवा वासयति छादयति व्याप्नोतीति यावत्। अविद्यादिना आवृणोतीति यावदिति वा। 'वस आच्छादने' तत उण्। क्रीडया देवः। पूर्ववत्समासः।

अथवा वशब्दस्य बलार्थकत्वात् वो बलरूपः। ''स वै बलं बलिनां चापरेषाम्'' इति भागवते। असुः प्राणरूपः। ददात्यभिमतमिति दे। 'दाण् दाने' तत एकारः ''कृन्मेजन्त''इत्यव्ययम्। वर्तयतीति वः 'वृतु वर्तने' ततो डः। वश्चासौ असुश्चासौ दे चासौ वश्चेति विग्रहः। तथा च सौकरायणश्रुतिः।

**''वानात्सूतेर्देवनाद्वासुदेवो वासाद्द्युतेश्छादनात्क्रीडया च।**
**बलादसुत्वाद्दातृतो वर्तनाच्च तं वासुदेवं प्रवदन्ति वेदाः॥''इति।**

किंवा वं अमृतं आ समन्तात् सर्वदैत्यभ्यः इति यावत्, सुतरां दिव्यति विजिगीषतीति मोहिनीरूपे इति भावः। ''वकारश्चामृतं स्मृतम्''इत्यभिधानम् इत्यलं विस्तरेण ॥४॥

**५. ब्रह्मगायत्रीमन्त्रः**

त्रिवारमुच्चरितात् नारायणमन्त्रात् तथा व्याहृतिमन्त्राद्वा द्विवारमुच्चरितात् वासुदेवमन्त्राद्वाऽभिव्यक्तत्वात् वासुदेवमन्त्राक्षरतोऽधिकाक्षरत्वाच्च पञ्चमत्वेन गायत्रीमन्त्रोऽभिहितः॥ तदिति॥

॥ ॐ तत्स॑वि॒तुर्वरे॑ण्यं॒ भर्गो॑ दे॒वस्य॑ धीमहि
धियो॒ यो नः॑ प्रचो॒दया॑त् ॐ॥

यः सवित्राख्यो नारायणः । नः अस्माकम् । धियः बुद्धयुपलक्षितसर्वेन्द्रियाणि । प्रचोदयात् प्रेरयेत् । 'चुद प्रेरणे' ततो लेट् । तस्य सवितुः सवति जगदिति सविता तस्य । 'षूङ् प्राणिप्रसवे' ततस्तृच् । देवस्य दिव्यतीति देवः, द्योतनार्थात् कर्तरि पचाद्यच् । यद्वा दिव्यति विजयते काम्यति वा व्यवहरति, स्तूयते इति वा । स्तुत्यर्थात्कर्मणि घञ् । तस्य नारायणस्य । तत् विस्तृतं गुणैर्व्याप्तमित्यर्थः । ''त्यजियजितनिभ्योऽट्'' इति तनोतेरट् प्रत्ययः । अत एव वरेण्यं भजनीयं, वृञ् एण्य इति वृणोतेः कर्मणि ण्यः । भर्गः भा दीप्तिः रतिः क्रीडा गतिर्ज्ञानं गत्यर्थानां ज्ञानार्थत्वात् गमेर्ज्ञानार्थता । 'भा दीप्तौ' 'रमु क्रीडायां' 'गम्लृ गतौ' इति धातुसमुदायादसुन्, 'उणादयो बहुलम्'इत्युक्तत्वात् । ''अदिभूभ्यां डुतच्''इति यथा । असुन् प्रत्ययसन्नियोगेन ह्रस्वता रमेर्गमेश्च 'टि'लोपः । दीप्तिरतिज्ञानस्वरूपमित्यर्थः । धीमहि चिन्तयामः । 'ध्यै चिन्तायां' ध्यायतेः सम्प्रसारणं विकरणलोपश्च । आत्मनेपदं छान्दसं ''व्यत्ययो बहुलम्'' इति वचनात् ।

**''गुणैस्ततः प्रसविता वरणीयो गुणोन्नतेः ।**
**भारतिज्ञानरूपत्वात् भर्गो ध्येयोऽखिलैर्जनैः ।**
**प्रेरकोऽशेषबुद्धीनां स गायत्र्यर्थ ईरितः''॥ इति ऋग्भाष्ये ।**

**''द्योतनाद्विजयात्कान्त्या स्तुत्या व्यवहृतेरपि ।**
**गत्या रत्या च देवाख्यं................॥''इति च ।**

दिव् क्रीडेत्यादौ ॥५॥

**६. मात्रकामन्त्राः**

प्रणवमन्त्रात् मात्रकामन्त्राणामभिव्यक्तत्वेऽपि आदौ च उक्तत्वेऽपि ऋष्यादिकथने गायत्र्यनन्तरमेव उक्त्या गायत्र्यक्षरतोऽक्षराधिक्याच्च षष्ठत्वेन मात्रकामन्त्रः ॥ **अं अजाय नम इत्यादि** ॥ अयं मालामन्त्रः ।

**॥ ॐ अं अजाय नमः ॐ ॥**

''ॐ अं भवेत्परं ब्रह्म''इत्येकाक्षराद्यनुशासनबलेन अकारादिबीजानां विष्णुपरार्थत्वेऽपि ग्रन्थबाहुल्यभिया सङ्क्षेपादेव व्याक्रियते ।

अं इत्यव्ययरूपं बीजम् । अकारवाच्याय इत्यर्थः । यद्वा अकारस्येत्यर्थः । 'नियामकाय'इति शेषः । अजाय न जायत इत्यजः । तस्मै नमः । 'करोमि'इति सर्वत्र शेषः ।

अजति गच्छति विश्वं जानाति सर्वमिति वा अजः तस्मै । 'अज गतिक्षेपणयोः' इति धातुः ॥१॥

॥ ॐ आं आनन्दाय नम ॐ ॥

आं आकारस्य ईशाय । आनन्दाय आनन्दरूपत्वात् आनन्दः । तस्मै ।

अथवा आशब्दवाच्यं ब्रह्माणं आनन्दयतीति स तथा तस्मै । ''आकारस्तु पितामहः'' इत्युक्तेः ।

आ समन्तात् अनं प्राणं दयते पालयति इति । 'देङ् पालने' । तस्मै ॥२॥

॥ ॐ इं इन्द्राय नम ॐ ॥

इं इकारस्येशाय । इन्द्राय इन्दति सर्वस्य इष्टे इतीन्द्रः तस्मै । 'इदि परमैश्वर्ये' इति धातोः औणादिको रप्रत्ययः ।

यद्वा इदं विषयजातं उद्दिश्य द्रवति सर्वविषयान्भुनक्ति इति यावत् स इन्द्रस्तस्मै । इदंशब्दोपपदात् 'द्रु गतौ'इत्यस्मात् डः, उपपदस्य च इम् इत्यादेशः ।

अथवा इदं सर्वं ददर्शेति इन्द्रः । पूर्ववद्दृशेर्डः । तथा च श्रुतेः ''इदमदर्शम्''इत्यादि ।

दीप्तिमत्त्वाच्चेन्द्रः । 'इन्धि दीप्तौ' इत्यस्मात् ड प्रत्ययः । धस्य च दः । ''इन्धो ह वै नाम''इत्यादि श्रुतेः ।

इदमभीष्टं राति ददातीति वा । रातेः कः, इदमश्च इन्दादेशः । तस्मै नम इति ॥ ३॥

## ॥ ॐ ईं ईशाय नम ॐ ॥

ईं ईकारस्य ईशाय । ईष्टेऽसौ ईशः समर्थ इत्यर्थः । ''प्रभुरीशः समर्थश्च''इत्यभिधानम् ।

यद्वा ईः लक्ष्मीः तस्याः ईशः स्वामी ।

अथवा ईशब्दवाच्यायाः रमायाः इं कामं श्यति तनूकरोतीति ईशः रमाकामापहर्ता इत्यर्थः । ''इकारो मदनः प्रोक्तो लक्ष्मीरीकार उच्यते''इत्येकाक्षरः । इकारस्य सवर्णदीर्घत्वात् अन्य इकारः । 'शो तनूकरणे' इति धातुः । तस्मै नमः'करोमि'इति शेषेण अन्वयः ॥४॥

## ॥ ॐ उं उग्राय नम ॐ ॥

उं उकारस्य ईशाय । उग्राय नृसिंहरूपत्वादसौम्याय ।

यद्वा उच्यति क्रुधा सम्बध्यते स तथा । 'उच समवाये' ऋज्रेत्यादिना रत् गान्तादेशः ।

उं उग्रं ग्रसति महाप्रलये इति । ''उकारः शङ्कर प्रोक्तः''इति एकाक्षरः । तस्मै नम इति ॥५॥

## ॥ ॐ ऊं ऊर्जाय नम ॐ ॥

ऊं ऊकारस्य ईशाय ऊर्जाय बलवते जीवकाय वा । 'ऊर्ज बलप्राणनयोः'इति धातुः ॥६॥

## ॥ ॐ ऋं ऋतम्भराय नम ॐ ॥

ऋं ऋकारस्य ईशाय । ऋतम्भराय ऋतं सत्यरूपं जगत् बिभर्तीति । ''विश्वं सत्यम्''इति श्रुतेः । तस्मै ।

विश्वपोषकाय वा 'डु भृञ् धारणपोषणयोः' इति धातुः ।

'ऋ गतौ' इति धातोः । गत्यर्थानां ज्ञानार्थत्वाच्च ऋतं ज्ञानं तद्धारको वा । तस्मै ॥७॥

॥ ॐ ॠं [1]ॠद्धाय नम ॐ ॥

ॠं ॠकारस्य ईशाय । ॠद्धाय समृद्धाय सकलकलाशक्त्यादिगुणपूर्णाय इत्यर्थः । 'ॠघाय' इति पाठे इयर्ति सर्वं जानाति जिघर्ति दीप्यते च इति ॠघः तस्मै । 'ॠ गतौ' 'घृ क्षरणदीप्त्योः' इति धातुद्वयजोऽयम् ॥८॥

॥ ॐ ऌं ऌशाय नम ॐ

ऌं ऌकारस्य ईशाय । ऌशाय लाति इयर्ति श्यति इति ऌशः तस्मै । 'ला दाने' 'ऋ गतौ' 'शो तनूकरणे' इति धातुत्रयजोऽयम् ॥९॥

॥ ॐ ॡं ॡजये नम ॐ ॥

ॡं ॡकारस्य ईशाय । ॡजये लाति ऋच्छति जयति इति ॡजिः तस्मै । 'ला दाने' 'ऋ गतौ' 'जि जये' इति धातुत्रयजोऽयम् ॥

यद्यपि ''लाति ऋच्छति जयति रमयति च सर्वमिति ॡजिरः तस्मै । 'ला दाने' 'ऋ गतौ' 'जि जये' 'रमु क्रीडायां' (ण्यन्तश्चान्त्यः) इति धातुचतुष्टयजोऽयं'' इति गङ्गोदकमिश्रेण धातुचतुष्टयादस्य प्रसिद्धिरुपपादिता । तथापि मूलविरोधात् अस्वरसा सा । तत्र ''ॡजिरेकात्मैरः'' इति मूलपाठेन इकारान्तस्यैव औचित्यात् । अकारान्तत्वे पदच्छेदानुपपत्तेः । द्वयोः त्रयाणां वा एकपदान्तत्वाङ्गीकारे एकवचनान्तानुपपत्तेः । अन्यथा 'हंसळाळुकौ' इत्यत्र द्विवचनाभावप्रसङ्गात् । न च 'ॡजिर्' इति शब्दः । तथाविधरेफान्तशब्दस्य क्वापि अदर्शनात् । 'हवि'रादिवत् स्यादिति चेन्न । तत्र रमतेः अङ्गीकारप्रसङ्गात् । तस्मात् 'ॡजि'रिति धातुत्रयजः इकारान्तशब्द एव समुचितः ॥१०॥

---

१. मुद्रितेषु पुस्तकेषु 'ॠघाय' इत्येव पाठः । न तु कुत्रचित् 'ॠद्धाय' इति । मुद्रिततन्त्रसारसङ्ग्रहेऽपि 'ॠघऌशौ' इति वर्तते । श्रीछलार्याचार्याणां श्रीशेषचन्द्रिकाचार्याणां च व्याख्यानेऽपि 'ॠघाय' इति पाठ एव दृश्यते ।

'ಗತಿಶ್ಚ ಸರ್ವಭೂತಾನಾಂ ಪ್ರಜಾನಾಂ ಚಾಪಿ ಭಾರತ ।
ವ್ಯಾಪ್ತೋಽಹಂ ರೋದಸೀ ಪಾರ್ಥ ಕಾಂತಿಶ್ಚಾಭ್ಯಧಿಕಾ ಮಮ ॥
ಅಧಿಭೂತನಿವಿಷ್ಟಶ್ಚ ತದಿಚ್ಛುಶ್ಚಾಸ್ಮಿ ಭಾರತ ।
ಕ್ರಮಣಾಚ್ಚಾಽಪ್ಯಹಂ ಪಾರ್ಥ ವಿಷ್ಣುರಿತ್ಯಭಿಸಂಜ್ಞಿತಃ ॥

ಎಂದು ಹೇಳಿದ ಈ ವಚನವೇ ಮೇಲೆ ಹೇಳಿದ ಅರ್ಥದಲ್ಲಿ ಪ್ರಮಾಣವಾಗಿದೆ.

ಇಲ್ಲಿಗೆ ಅಷ್ಟಮಹಾಮಂತ್ರಗಳ ವ್ಯಾಖ್ಯಾನವು ಮುಗಿಯಿತು.



## ತಂತ್ರಸಾರ ತೃತೀಯಾಧ್ಯಾಯೋಕ್ತ ಮಂತ್ರಗಳು

### ೧. ವಿಷ್ಣುಗಾಯತ್ರೀ ಮಂತ್ರ

**॥ ಓಂ ನಾರಾಯಣಾಯ ವಿದ್ಮಹೇ ವಾಸುದೇವಾಯ ಧೀಮಹಿ**
**ತನ್ನೋ ವಿಷ್ಣುಃ ಪ್ರಚೋದಯಾತ್ ಓಂ ॥**

ನಾವು ನಾರಾಯಣನ ಪ್ರೀತಿಗಾಗಿ ಅವನನ್ನು ತಿಳಿಯುತ್ತೇವೆ. ಮತ್ತು ಹೊಂದುತ್ತೇವೆ. ಆ ವಾಸುದೇವನ ಪ್ರೀತಿಗಾಗಿ ಅವನ ಧ್ಯಾನವನ್ನು ಮಾಡುತ್ತೇವೆ. ಆದ್ದರಿಂದ ಆ ವಿಷ್ಣುವು ನಮ್ಮನ್ನು ಹಾಗು ನಮ್ಮ ಮನ ಆದಿ ಇಂದ್ರಿಯಗಳನ್ನು ತನ್ನ ಧ್ಯಾನಾದಿಸತ್ಕರ್ಮಗಳಲ್ಲಿ ಪ್ರೇರಿಸಲಿ.

ವಿಶೇಷ :- ಅಪರೋಕ್ಷಜ್ಞಾನವು ಭಗವಂತನ ಪ್ರಾಪ್ತಿಗೆ ಸಾಧನವಾಗಿರುತ್ತದೆ. ಈ ಅಪರೋಕ್ಷಜ್ಞಾನಕ್ಕಾಗಿ ಶ್ರವಣ, ಮನನ, ಧ್ಯಾನಗಳು ಆವಶ್ಯಕ. ಅವುಗಳನ್ನು ಮಾಡಬೇಕಾದರೆ ನಮ್ಮ ಮನ ಆದಿ ಇಂದ್ರಿಗಳು ನಮಗೆ ಅನುಕೂಲಗಳಾಗಿರಬೇಕು. ಅವುಗಳು ಅನುಕೂಲವಾಗುವದಕ್ಕಾಗಿಯೇ ಭಗವಂತನನ್ನು ಪ್ರಾರ್ಥಿಸಿಕೊಳ್ಳುವುದು ಆವಶ್ಯಕ. ಆದ್ದರಿಂದ ಈ ಮಂತ್ರವನ್ನು ವಿಶೇಷತಃ ಜಪಿಸಬೇಕು.

ವಿಷ್ಣುಗಾಯತ್ರೀ ಮಂತ್ರವನ್ನು ಹೇಳಿದ ನಂತರ ತತ್ತ್ವಮಂತ್ರಗಳನ್ನು ಹೇಳಬಯಸಿ ಮೊದಲಿಗೆ 'ಲಕ್ಷ್ಮೀನಾರಾಯಣರ' ಸ್ವರೂಪಪರವಾಗಿರುವ ಮಂತ್ರಗಳು ಪ್ರಧಾನವಾಗಿರುವುದರಿಂದ ಅವುಗಳನ್ನು ಹೇಳಲಪೇಕ್ಷಿಸಿ ಮೊದಲನೆಯದಾಗಿ ಶಕ್ತಿತತ್ತ್ವಮಂತ್ರವನ್ನು ಹೇಳುತ್ತಾರೆ.

### ೨ ತತ್ತ್ವಮಂತ್ರ.

**ಓಂ ಪರಾಯ ಶಕ್ತ್ಯಾತ್ಮನೇ ಲಕ್ಷ್ಮೀನಾರಾಯಣಾಭ್ಯಾಂ ನಮ ಓಂ ॥೧॥**

ಸರ್ವೋತ್ಕೃಷ್ಟರಾದ ಶಕ್ತಿಸ್ವರೂಪರಾದ ಮತ್ತು (ವಿಶೇಷಬಲಾತ್) ತದಭಿಮಾನಿಗಳಾದ ಲಕ್ಷ್ಮೀನಾರಾಯಣರಿಗೆ ನಮಸ್ಕಾರವು.

'ಮಹಾಲಕ್ಷ್ಮೀಸ್ವರೂಪಾಣಿ ಹ್ಯೇಕಾದಶವಿದೋ ವಿದುಃ ।
ವಿಷ್ಣೋರಪಿ ಸ್ವರೂಪಾಣಿ ತನ್ನಾಮ್ನೈಕಾದಶೈವ ತು ॥

ಎಂಬುದಾಗಿ ಶ್ರೀಮದಾಚಾರ್ಯರು 'ತಂತ್ರಸಾರಸಂಗ್ರಹ'ದಲ್ಲಿ ಹೇಳಿದ್ದಾರೆ.

ವಿಶೇಷ :- ವಸ್ತುತಃ 'ಓಂ ಪರಾಯ ಶಕ್ತ್ಯಾತ್ಮನೇ ನಮ ಓಂ' ಎಂಬುವುದಷ್ಟೇ ಶಕ್ತಿತತ್ತ್ವಮಂತ್ರವು. 'ಲಕ್ಷ್ಮೀನಾರಾಯಣಾಭ್ಯಾಂ' ಎಂಬ ಈ ಪದವು ಮಂತ್ರದ

ಅಂಗವಲ್ಲ. ಹಾಗಿದ್ದರೂ ಅಭಿಮಾನಿಗಳನ್ನು ತಿಳಿಯದೇ ಮಾಡಿದ ಕರ್ಮವು ಮಹಾಫಲಪ್ರದವಾಗದಿರುವುದರಿಂದ ಮತ್ತು ಶಕ್ತ್ಯಾದಿ ತತ್ವಗಳ ಅಭಿಮಾನಿಗಳು ಯಾರು? ಎಂಬ ಅಜ್ಞಾನಿಗಳ ಆಕಾಂಕ್ಷೆಯು ಶಾಂತವಾಗದಿರುವುದರಿಂದ ಮಹಾಫಲಕ್ಕಾಗಿ ಮತ್ತು ಆಕಾಂಕ್ಷಾಪರಿಹಾರಕ್ಕಾಗಿ 'ಲಕ್ಷ್ಮೀನಾರಾಯಣಾಭ್ಯಾಂ' ಎಂಬ ಪದವನ್ನು ಸೇರಿಸಿ ಜಪಿಸುವ ಸಂಪ್ರದಾಯವು ಬಂದಿರುತ್ತದೆ. ಆದ್ದರಿಂದ ಏಕವಚನ, ದ್ವಿವಚನಗಳಿಗೆ ಅನ್ವಯಾನುಪಪತ್ತಿರೂಪವಾದ ದೋಷವಿಲ್ಲ. ಹೀಗೆಯೇ ಮುಂದೆಯೂ ತಿಳಿಯಬೇಕು. ಎಂಬುವುದು ಪಾಂಘ್ರಿ ಶ್ರೀನಿವಾಸಾಚಾರ್ಯರ ಅಭಿಪ್ರಾಯವು.

'ಲಕ್ಷ್ಮೀನಾರಾಯಣಾಭ್ಯಾಂ' ಎಂದು ದ್ವಿವಚನ ಪ್ರಯೋಗಮಾಡುವುದರಿಂದ ಲಕ್ಷ್ಮೀನಾರಾಯಣರಲ್ಲಿ ಪರಸ್ಪರ ಭೇದವು ಸೂಚಿತವಾಯಿತು. ಆದರೆ ಅದು ಯುಕ್ತವಲ್ಲ. ಈಶ ರಮೆಯರಿಗೆ ಅಭೇದವನ್ನು ಅಂಗೀಕರಿಸಿದರೆ ಪ್ರಮಾಣವಿರೋಧ ಬರುತ್ತದೆ ಎಂಬ ಭಯದಿಂದ ಭೇದವನ್ನು ಒಪ್ಪಿ ಪಂಚಭೇದವಿಷಯಕ ವಾಕ್ಯದ ವಿರೋಧಪರಿಹಾರಕ್ಕಾಗಿ ರಮೆಯನ್ನು ಜೀವಕೋಟಿಯಲ್ಲಿ ಅಥವಾ ಜಡಕೋಟಿಯಲ್ಲಿ ಅಂತರ್ಭಾವಮಾಡಲು ಹೊರಟರೆ ಪ್ರಮಾಣವಿರೋಧವು ಅಪರಿಹಾರ್ಯ. ಮತ್ತು ಅಂತರ್ಭಾವವು ಸುದುಷ್ಕರ. ಆದ್ದರಿಂದ ಪರಿಶೇಷತಃ ರಮೆಯನ್ನು ಈಶಕೋಟಿಯಲ್ಲೇ ಅಂತರ್ಭಾವಮಾಡಬೇಕು. ಹಾಗೆ ಮಾಡಿದರೆ ಈಶಕೋಟಿಪ್ರವಿಷ್ಟರಲ್ಲಿ ಪರಸ್ಪರ ಭೇದವು ಅನುಕ್ತವಾಗಿದೆ ಅಲ್ಲಿಯೂ ಪರಸ್ಪರಭೇದವನ್ನು ಹೇಳುವದಾದರೆ ರಾಮಕೃಷ್ಣಾದಿ-ರೂಪಗಳಲ್ಲೂ ಪರಸ್ಪರ ಭೇದವನ್ನು ಹೇಳಬೇಕಾಗುತ್ತದೆ. ಅದು "ನೇಹ ನಾನಾಽಸ್ತಿ ಕಿಂಚನ" ಇತ್ಯಾದಿ ಪ್ರಮಾಣ ವಿರುದ್ಧವಾದುದು. ಆದ್ದರಿಂದ ಈಶಕೋಟಿಪ್ರವಿಷ್ಟರಲ್ಲಿ ಪರಸ್ಪರ ಭೇದವನ್ನು ಅಂಗೀಕರಿಸಬಾರದು. ತಥಾ ಚ ರಮೆಯೂ ಈಶಕೋಟಿಪ್ರವಿಷ್ಟ-ಳಾದುದರಿಂದ ರಮಾನಾರಾಯಣರಲ್ಲೂ ಪರಸ್ಪರ ಭೇದವನ್ನು ಅಂಗೀಕರಿಸುವುದು ಅಯುಕ್ತವಾದುದು. ಎಂಬ ಶಂಕೆಯನ್ನು ಮಾಡಿಕೊಂಡು ಪಾಂಘ್ರೀ ಶ್ರೀನಿವಾಸಾಚಾರ್ಯರು ಹೀಗೆ ಉತ್ತರಿಸಿದ್ದಾರೆ. ರಮಾನಾರಾಯಣರಲ್ಲಿ ಭೇದವು ಯುಕ್ತವಾಗಿದೆ. ತತ್ತ್ವವಿವೇಕಾದಿ ಗ್ರಂಥಗಳಲ್ಲಿ ರಮಾನಾರಾಯಣರಲ್ಲಿ ಪರಸ್ಪರ ಭೇದವನ್ನು ಅಂಗೀಕರಿಸಿದ್ದಾರೆ. ಹಾಗಾದರೆ ಆರು ಭೇದಗಳನ್ನು ಅಂಗೀಕರಿಸಿದಂತಾಗುವುದರಿಂದ ಪಂಚಭೇದವಿಷಯಕ ವಾಕ್ಯಗಳ ವಿರೋಧ ಬರುವದಿಲ್ಲವೇ ? ಎಂಬ ಶಂಕೆಯನ್ನು ವಿವಕ್ಷಾಭೇದದಿಂದ ಪರಿಹರಿಸಲು ಬರುತ್ತದೆ. ಯಾವ ಪರಮಶ್ರುತ್ಯಾದಿಗಳಲ್ಲಿ ಪಂಚಭೇದವನ್ನು ಹೇಳಿದ್ದಾರೆಯೋ ಅಲ್ಲಿ ಈಶಕೋಟಿಯಲ್ಲಿ ಮಹಾಭೇದಾನಂಗೀಕಾರ ವಿವಕ್ಷಾ ಇರುತ್ತದೆ. ತತ್ತ್ವವಿವೇಕಾದಿಗಳಲ್ಲಿ ಅವಾಂತರಭೇದಾಂಗೀಕಾರ ವಿವಕ್ಷಾ ಇರುತ್ತದೆ. ಪ್ರಕೃತದಲ್ಲಿ

ಅವಾಂತರಭೇದಾಂಗೀಕಾರ ವಿವಕ್ಷಯಾ ಈಶಕೋಟಪ್ರವಿಷ್ಟರಾದ ರಮಾನಾರಾಯಣರಲ್ಲಿ ಭೇದವನ್ನು ಹೇಳಿದ್ದಾರೆ. ಆದ್ದರಿಂದ "ಲಕ್ಷ್ಮೀನಾರಾಯಣಾಭ್ಯಾಂ" ಎಂಬ ದ್ವಿವಚನ-ಪ್ರಯೋಗವು ಅತ್ಯಂತ ಸಾಧು.

**॥ ಓಂ ಪರಾಯ ಪ್ರತಿಷ್ಠಾತ್ಮನೇ ಲಕ್ಷ್ಮೀನಾರಾಯಣಾಭ್ಯಾಂ ನಮಃ ಓಂ ॥೨॥**

ಸರ್ವೋತ್ಕೃಷ್ಟರಾದ 'ಬಹುಗೌರವ' ವೆಂಬ ಗುಣಸ್ವರೂಪರಾದ ಅಥವಾ ಸರ್ವಪದಾರ್ಥಸ್ಥಿತಿರೂಪ ಕರ್ಮದಿಂದ ಅಭಿನ್ನರಾದ ತದಭಿಮಾನಿಗಳಾದ ಲಕ್ಷ್ಮೀನಾರಾಯಣರಿಗೆ ನಮಸ್ಕಾರವು.

**॥ ಓಂ ಪರಾಯ ಸಂವಿದಾತ್ಮನೇ ಲಕ್ಷ್ಮೀನಾರಾಯಣಾಭ್ಯಾಂ ನಮಃ ಓಂ ॥೩॥**

ಸರ್ವೋತ್ಕೃಷ್ಟರಾದ ಸಮೀಚೀನವಾದ ಅಪರೋಕ್ಷಜ್ಞಾನದ ಸ್ವರೂಪರಾದ ಮತ್ತು ತದಭಿಮಾನಿಗಳಾದ ಲಕ್ಷ್ಮೀನಾರಾಯಣರಿಗೆ ನಮಃ .

**॥ ಓಂ ಪರಾಯ ಸ್ಫೂರ್ತ್ಯಾತ್ಮನೇ ಲಕ್ಷ್ಮೀನಾರಾಯಣಾಭ್ಯಾಂ ನಮಃ ಓಂ ॥೪॥**

ಸರ್ವೋತ್ಕೃಷ್ಟರಾದ 'ಸ್ಫುರಣ' ಅಥವಾ 'ಉಪಸ್ಥಿತಿ' ಸ್ವರೂಪರಾದ ಹಾಗು ತದಭಿಮಾನಿಗಳಾದ ಲಕ್ಷ್ಮೀನಾರಾಯಣರಿಗೆ ನಮಃ .

**॥ ಓಂ ಪರಾಯ ಪ್ರವೃತ್ತ್ಯಾತ್ಮನೇ ಲಕ್ಷ್ಮೀನಾರಾಯಣಾಭ್ಯಾಂ ನಮಃ ಓಂ ॥೫॥**

ಸರ್ವೋತ್ಕೃಷ್ಟರಾದ ಪ್ರವೃತ್ತಿ (ಉದ್ಯೋಗ) ಸ್ವರೂಪರಾದ ಹಾಗು ತದಭಿಮಾನಿಗಳಾದ ಲಕ್ಷ್ಮೀನಾರಾಯಣರಿಗೆ ನಮಃ

**॥ ಓಂ ಪರಾಯ ಕಲಾತ್ಮನೇ ಲಕ್ಷ್ಮೀನಾರಾಯಣಾಭ್ಯಾಂ ನಮಃ ಓಂ ॥೬॥**

ಸರ್ವೋತ್ಕೃಷ್ಟರಾದ 'ಕೌಶಲ'ಸ್ವರೂಪರಾದ ಹಾಗು ತದಭಿಮಾನಿಗಳಾದ ಲಕ್ಷ್ಮೀನಾರಾಯಣರಿಗೆ ನಮಃ .

**॥ ಓಂ ಪರಾಯ ವಿದ್ಯಾತ್ಮನೇ ಲಕ್ಷ್ಮೀನಾರಾಯಣಾಭ್ಯಾಂ ನಮಃ ಓಂ ॥೭॥**

ಸರ್ವೋತ್ಕೃಷ್ಟರಾದ 'ಪರೋಕ್ಷಜ್ಞಾನ' ಸ್ವರೂಪರಾದ ಹಾಗು ತದಭಿಮಾನಿಗಳಾದ ಲಕ್ಷ್ಮೀನಾರಾಯಣರಿಗೆ ನಮಃ .

**॥ ಓಂ ಪರಾಯ ಮತ್ಯಾತ್ಮನೇ ಲಕ್ಷ್ಮೀನಾರಾಯಣಾಭ್ಯಾಂ ನಮಃ ಓಂ ॥೮॥**

ಸರ್ವೋತ್ಕೃಷ್ಟರಾದ 'ಮನನ' ಸ್ವರೂಪರಾದ ಹಾಗು ತದಭಿಮಾನಿಗಳಾದ ಲಕ್ಷ್ಮೀನಾರಾಯಣರಿಗೆ ನಮಃ .

**॥ ಓಂ ಪರಾಯ ನಿಯತ್ಯಾತ್ಮನೇ ಲಕ್ಷ್ಮೀನಾರಾಯಣಾಭ್ಯಾಂ ನಮಃ ಓಂ ॥೯॥**

ಸರ್ವೋತ್ಕೃಷ್ಟರಾದ 'ನಿಯಮನ' ಸ್ವರೂಪರಾದ ಹಾಗು ತದಭಿಮಾನಿಗಳಾದ ಲಕ್ಷ್ಮೀನಾರಾಯಣರಿಗೆ ನಮಃ .

**॥ ಓಂ ಪರಾಯ ಮಾಯಾತ್ಮನೇ ಲಕ್ಷ್ಮೀನಾರಾಯಣಾಭ್ಯಾಂ ನಮಃ ಓಂ ॥೧೦॥**

ಸರ್ವೋತ್ಕೃಷ್ಟರಾದ 'ಇಚ್ಛಾ' ಸ್ವರೂಪರಾದ ಹಾಗು ತದಭಿಮಾನಿಗಳಾದ ಲಕ್ಷ್ಮೀನಾರಾಯಣರಿಗೆ ನಮಃ

**॥ ಓಂ ಪರಾಯ ಕಾಲಾತ್ಮನೇ ಲಕ್ಷ್ಮೀನಾರಾಯಣಾಭ್ಯಾಂ ನಮಃ ಓಂ ॥೧೧॥**

ಸರ್ವೋತ್ಕೃಷ್ಟರಾದ 'ಕಾಮಪೂರ್ತಿ' ಎಂಬ ಗುಣಸ್ವರೂಪರಾದ ತದಭಿಮಾನಿಗಳಾದ ಲಕ್ಷ್ಮೀನಾರಾಯಣರಿಗೆ ನಮಃ

ಇಲ್ಲಿಯವರೆಗೆ ಲಕ್ಷ್ಮೀನಾರಾಯಣಸ್ವರೂಪಾಭಿನ್ನ ತತ್ತ್ವಗಳ ಮಂತ್ರಗಳನ್ನು ಹೇಳಿ ಮುಂದೆ ಅಭಿಮಾನಿಗಳಿಂದ ಭಿನ್ನಗಳಾದ ತತ್ತ್ವಗಳ ಮಂತ್ರಗಳನ್ನು ಹೇಳುವವರಾಗಿ ಮೊದಲಿಗೆ ಅಚೇತನ ತತ್ತ್ವಕ್ಕಿಂತಲೂ ಚೇತನ (ಪುರುಷ) ತತ್ತ್ವವು ಪ್ರಧಾನವಾಗಿರುವುದರಿಂದ ಚೇತನತತ್ತ್ವಮಂತ್ರಗಳನ್ನು ಹೇಳುತ್ತಾರೆ.

**॥ ಓಂ ಪರಾಯ ಪುರುಷಾತ್ಮನೇ ಬ್ರಹ್ಮವಾಯುಭ್ಯಾಂ ನಮಃ ಓಂ ॥೧೨॥**

ಸರ್ವೋತ್ಕೃಷ್ಟನಾದ ಜೀವತತ್ತ್ವ ಹಾಗು ತದಭಿಮಾನಿ ಬ್ರಹ್ಮವಾಯುದೇವತಾಂತರ್ಗತನಾದ ವಿಷ್ಣುವಿಗೆ ಮತ್ತು ಜೀವತತ್ತ್ವಾಭಿಮಾನಿಗಳಾದ ಬ್ರಹ್ಮವಾಯು ಇವರಿಬ್ಬರಿಗೂ ನಮಃ

**॥ ಓಂ ಪರಾಯ ಅವ್ಯಕ್ತಾತ್ಮನೇ ಬ್ರಹ್ಮಾಣೀಭಾರತೀಭ್ಯಾಂ ನಮಃ ಓಂ ॥೧೩॥**

ಸರ್ವೋತ್ಕೃಷ್ಟನಾದ ಅವ್ಯಕ್ತ ತತ್ತ್ವಗೋಲಕ ಹಾಗು ತದಭಿಮಾನಿನೀ ಸರಸ್ವತೀ, ಭಾರತೀ ಇವರ ಅಂತರ್ಗತನಾದ ವಿಷ್ಣುವಿಗೆ ಮತ್ತು ಅವ್ಯಕ್ತತತ್ತ್ವಗೋಲಕಕ್ಕೆ ಅಭಿಮಾನಿನಿಗಳಾದ ಸರಸ್ವತೀ ಭಾರತೀದೇವಿಯವರಿಗೆ ನಮಃ

ವಿಶೇಷ :- ಇಲ್ಲಿ ಅವ್ಯಕ್ತ ತತ್ತ್ವನ್ಯಾಸವನ್ನು ಪುರುಷನ ದಕ್ಷಿಣಬಾಹುವಿನಲ್ಲಿ ಮಹತ್ತತ್ತ್ವನ್ಯಾಸವನ್ನು ಎಡಬಾಹುವಿನಲ್ಲಿ ಹೇಳಿದ್ದಾರೆ. ಆದರೆ ಇದು ಯುಕ್ತವಲ್ಲವೆಂದು ತೋರುತ್ತದೆ. ಪುರಷನ ವಾಮಾಂಗಕ್ಕಿಂತಲೂ ದಕ್ಷಿಣಾಂಗ ಶ್ರೇಷ್ಠ. ಪತ್ನಿಗಿಂತಲೂ ಪತಿಯು ಶ್ರೇಷ್ಠನು. ಅತಃ ದಕ್ಷಿಣಬಾಹುವಿನಲ್ಲಿ ಬ್ರಹ್ಮಾಣೀ ಭಾರತೀಯರನ್ನು ವಾಮಭಾಗದಲ್ಲಿ ಬ್ರಹ್ಮವಾಯುಗಳನ್ನು ನ್ಯಾಸಮಾಡುವುದು ಅನುಚಿತ ಎಂಬ ಶಂಕೆಗೆ ಹೀಗೆ

ಸಮಾಧಾನವನ್ನು ಹೇಳಬೇಕು. ಹರಿಯ ದಕ್ಷಿಣಾಂಗದಲ್ಲಿ ಬ್ರಹ್ಮವಾಯುಗಳಿರುತ್ತಾರೆ. ಹರಿಯ ವಾಮಭಾಗದಲ್ಲಿ ತತ್ಪತ್ನಿಯರಾದ ಸರಸ್ವತೀಬಾರತೀದೇವಿಯರು ಇರುತ್ತಾರೆ. ಕನ್ನಡಿಯಲ್ಲಿ ಪ್ರತಿಬಿಂಬದ ಬಲಭಾಗವನ್ನು ಮುಟ್ಟಿದರೆ ಬಿಂಬದ ಎಡಭಾಗವನ್ನು ಮುಟ್ಟದಂತಾಗುತ್ತದೆ. ಪ್ರತಿಬಿಂಬದ ಎಡಭಾಗವನ್ನು ಮುಟ್ಟಿದರೆ ಬಿಂಬದ ಬಲಭಾಗವನ್ನು ಮುಟ್ಟದಂತಾಗುತ್ತದೆ. ಅತಃ ಪರಮಾತ್ಮನ ಪ್ರತಿಬಿಂಬನಾದ ಜೀವನ ಬಲಭಾಗವು ಈ ಬಿಂಬನಾದ ಪರಮಾತ್ಮನ ಎಡಬಾಗವಾಗುತ್ತದೆ. ಅಲ್ಲಿ ಸರಸ್ವತೀಭಾರತೀಯರನ್ನು ಚಿಂತಿಸಿದಂತಾಯಿತು. ಜೀವನ ಎಡಭಾಗವು ಹರಿಯ ಬಲಭಾಗವಾಗಿರುವುದರಿಂದ ಅಲ್ಲಿ ಬ್ರಹ್ಮವಾಯುದೇವರನ್ನು ಚಿಂತಿಸದಂತಾಯಿತು. ತಥಾ ಚ ನಮ್ಮ ದಕ್ಷಿಣಭಾಗಾಪೇಕ್ಷಯಾ ಹರಿಯ ದಕ್ಷಿಣಭಾಗವು ಪ್ರಧಾನವಾಗಿ- ರುವುದರಿಂದ ನಮ್ಮ ಎಡಬಾಗದಲ್ಲಿ ಬ್ರಹ್ಮವಾಯುಗಳನ್ನು ಧ್ಯಾನಿಸಿದರೂ ಹರಿಯ ಬಲಭಾಗದಲ್ಲಿ ಅವರನ್ನು ಧ್ಯಾನಿಸಿದಂತಾಗುವುದರಿಂದ ಅವರ ಶ್ರೇಷ್ಠತೆಗೆ ಭಂಗವಿಲ್ಲ ಎಂದು ಪಾಂಘ್ರಿ ಶ್ರೀನಿವಾಸಾಚಾರ್ಯರು ವ್ಯಾಖ್ಯಾನದಲ್ಲಿ ತಿಳಿಸಿದ್ದಾರೆ.

**॥ ಓಂ ಪರಾಯ ಮಹದಾತ್ಮನೇ ಬ್ರಹ್ಮವಾಯುಭ್ಯಾಂ ನಮಃ ಓಂ ॥೧೪॥**

ಸರ್ವೋತ್ಕೃಷ್ಟನಾದ, ವೃದ್ಧಿರೂಪ ವಿಕಾರಯುಕ್ತವಾದ ಅವ್ಯಕ್ತತತ್ತ್ವ ಹಾಗು ತದಭಿಮಾನಿ ಬ್ರಹ್ಮವಾಯುಗಳ ಅಂತರ್ಗತನಾದ ಪರಮಾತ್ಮನಿಗೆ ಮತ್ತು 'ಮಹತ್' ಶಬ್ದವಾಚ್ಯವಾದ ವೃದ್ಧಿರೂಪವಿಕಾರಯುಕ್ತವಾದ ಅವ್ಯಕ್ತತತ್ತ್ವಕ್ಕೆ ಅಭಿಮಾನಿಗಳಾದ ಬ್ರಹ್ಮವಾಯುದೇವರಿಗೆ ನಮಃ

ವಿಶೇಷ :- ಇಲ್ಲಿ ವೃದ್ಧಿರೂಪ ವಿಕಾರಯುಕ್ತ ಅವ್ಯಕ್ತತತ್ತ್ವಶಬ್ದದಿಂದ ಮಹತತ್ತ್ವಾಂತರ್ಗತವಾದ ಅವ್ಯಕ್ತತತ್ತ್ವಾಂಶವನ್ನು ವಿವಕ್ಷಿಸಿದ್ದಾರೆ. ಆದ್ದರಿಂದ 'ಅವ್ಯಕ್ತತತ್ತ್ವಕ್ಕೆ ಲಕ್ಷ್ಮೀದೇವಿಯು ಅಭಿಮಾನಿನಿಯೆಂದು ಪ್ರಮಿತವಾಗಿರುವುದರಿಂದ ಬ್ರಹ್ಮವಾಯುಗಳನ್ನು ಅವ್ಯಕ್ತತತ್ತ್ವಾಭಿಮಾನಿಗಳೆಂದು ಹೇಳುವುದು ಯುಕ್ತವಲ್ಲ' ಎಂಬ ಶಂಕೆಗೆ ಅವಕಾಶವಿಲ್ಲವೆಂದು ಪಾಂಘ್ರೀ ಆಚಾರ್ಯರು ವ್ಯಾಖ್ಯಾನದಲ್ಲಿ ತಿಳಿಸಿದ್ದಾರೆ.

**॥ ಓಂ ಪರಾಯ ಅಹಂಕಾರಾತ್ಮನೇ ಗರುಡಶೇಷರುದ್ರೇಭ್ಯೋ ನಮಃ ಓಂ ॥೧೫॥**

ಸರ್ವೋತ್ಕೃಷ್ಟನಾದ ಕ್ರಮವಾಗಿ ದೇವತಾದೇಹ ಇಂದ್ರಿಯ ಭೂತಗಳಿಗೆ ಕಾರಣವಾದ ವೈಕಾರಿಕ ತೈಜಸ ತಾಮಸವೆಂಬ ತ್ರಿವಿಧ ಅಹಂಕಾರತತ್ತ್ವ ಹಾಗು ತದಭಿಮಾನಿ ಗರುಡಶೇಷರುದ್ರ ಇವರ ಅಂತರ್ಯಾಮಿಯಾದ ವಿಷ್ಣುವಿಗೆ ಮತ್ತು ಅಹಂಕಾರತತ್ತ್ವಾಭಿಮಾನಿಗಳಾದ ಗರುಡಶೇಷರುದ್ರರಿಗೆ ನಮಃ

**॥ ಓಂ ಪರಾಯ ಮನಆತ್ಮನೇ ಸ್ಕಂದೇಂದ್ರಾಭ್ಯಾಂ ನಮಃ ಓಂ ॥೧೬॥**

ಸರ್ವೋತ್ಕೃಷ್ಟನಾದ ಅಂತಃಕರಣ ಹಾಗು ತದಭಿಮಾನಿ ಸ್ಕಂದ (ಷಣ್ಮುಖ) ಇಂದ್ರದೇವರು ಇವರ ಅಂತರ್ಯಾಮಿಯಾದ ವಿಷ್ಣುವಿಗೆ ಹಾಗು ಷಣ್ಮುಖ ಇಂದ್ರದೇವರು ಇವರಿಗೆ ನಮಃ.

**॥ ಓಂ ಪರಾಯ ಶ್ರೋತ್ರಾತ್ಮನೇ ದಿಗ್ದೇವತಾಭ್ಯೋ ನಮಃ ಓಂ ॥೧೭॥**

ಸರ್ವೋತ್ಕೃಷ್ಟನಾದ ಕರ್ಣತತ್ತ್ವ (ಕಿವಿ) ಹಾಗು ತದಭಿಮಾನಿ ಇಂದ್ರಅಗ್ನಿಯಮಾದಿ ದೇವತೆಗಳ ಅಂತರ್ಯಾಮಿಯಾದ ವಿಷ್ಣುವಿಗೆ ಮತ್ತು ಶ್ರೋತ್ರಾಭಿಮಾನಿ ಇಂದ್ರಾದಿದಿದೇವತೆಗಳಿಗೆ ನಮಃ.

ವಿಶೇಷ :- ಶ್ರೋತ್ರಾದ್ಯಭಿಮಾನಿದೇವತೆಗಳ ನ್ಯಾಸವನ್ನು ಅವರಿಂದ ಅಭಿಮನ್ಯಮಾನವಾದ ಶ್ರೋತ್ರಾದಿಪ್ರದೇಶಗಳಲ್ಲಿಯೇ ಮಾಡುವುದು ಉಚಿತವೇ ಹೊರತು ಅಂಗುಲ್ಯಾದಿಗಳಲ್ಲಿ ಅಲ್ಲ ಎಂಬ ಶಂಕೆಯು ಬರುತ್ತದೆ. ಆದರೆ

'ನ್ಯಾಸೋಽಙ್ಗುಲೀಷೂರುಬಾಹುಮಧ್ಯೇಷು ಸಂವ್ಯವಸ್ಥಿತಃ ।

ಎಂಬ 'ತಂತ್ರಸಾರಸಂಗ್ರಹ' ವಚನವಿರೋಧ ಬರುವುದರಿಂದ ಶುಷ್ಕತರ್ಕವನ್ನು (ಊಹೆಯನ್ನು) ತ್ಯಜಿಸಿ ಶ್ರೋತ್ರಾದ್ಯಭಿಮಾನಿಗಳ ನ್ಯಾಸವನ್ನು ಅವರಿಂದ ಅಭಿಮನ್ಯ-ಮಾನವಾದ ಶ್ರೋತ್ರಾದಿಪ್ರದೇಶಗಳಲ್ಲೇ ಮಾಡಬೇಕಾಗಿದ್ದರೂ ಪ್ರಮಾಣಾನುರೋಧೇನ ಅಂಗುಲಿಗಳಲ್ಲಿ ನ್ಯಾಸಮಾಡುವುದೇ ಉಚಿತವು. ಶುಷ್ಕತರ್ಕವನ್ನು ಅವಲಂಬಿಸಿ ಹಾಗೆ ಶಂಕಿಸುವುದಾದರೆ ಆಕಾಶಾದಿಗಳು ಸರ್ವತ್ರ ವ್ಯಾಪ್ತವಾಗಿರುವುದರಿಂದ ಅವುಗಳಿಗೆ ಸೀಮಿತ ಸ್ಥಾನವಿಶೇಷವು ಇಲ್ಲದಿರುವುದರಿಂದ ಅವುಗಳ ನ್ಯಾಸವೇ ಇಲ್ಲದೆ ಹೋಗಬೇಕಾಗುತ್ತದೆ. ಆದ್ದರಿಂದ ಇಂದ್ರಾದಿ ದೇವತೆಗಳನ್ನು ಪ್ರಮಾಣಬಲೇನ ಅಂಗುಲಿಗಳಲ್ಲಿ ನ್ಯಾಸಮಾಡುವುದೇ ಉಚಿತವು ಎಂಬವುದು ವ್ಯಾಖ್ಯಾನಕಾರರಾದ ಪಾಂಥ್ರಿ ಆಚಾರ್ಯರ ಭಾವವು.

**॥ ಓಂ ಪರಾಯ ತ್ವಗಾತ್ಮನೇ ಪ್ರಾಣಾಯ ನಮಃ ಓಂ ॥೧೮॥**

ಸರ್ವೋತ್ಕೃಷ್ಟನಾದ ತ್ವಗಿಂದ್ರಿಯ ಹಾಗು ತದಭಿಮಾನಿಯಾದ ಇಂದ್ರಾನಿರುದ್ಧರ ಮಧ್ಯಯೋಗ್ಯತೆಯುಳ್ಳ ವಾಯುಪುತ್ರನಾದ ಪ್ರಾಣನಾಮಕ ವಾಯುವಿನ ಅಂತರ್ಯಾಮಿಯಾದ ವಿಷ್ಣುವಿಗೆ ಮತ್ತು ತ್ವಗಿಂದ್ರಿಯಕ್ಕೆ ಅಭಿಮಾನಿಯಾದ ಪ್ರಾಣನಾಮಕ ವಾಯುದೇವತೆಗೆ ನಮಃ.

**॥ ಓಂ ಪರಾಯ ಚಕ್ಷುರಾತ್ಮನೇ ಸೂರ್ಯಾಯ ನಮಃ ಓಂ ॥೧೯॥**

ಸರ್ವೋತ್ಕೃಷ್ಟನಾದ, ಚಕ್ಷುರಿಂದ್ರಿಯ ಹಾಗು ತದಭಿಮಾನಿ ಸೂರ್ಯದೇವನ ಅಂತರ್ಯಾಮಿಯಾದ ವಿಷ್ಣುವಿಗೆ ಮತ್ತು ಚಕ್ಷುರಭಿಮಾನಿಸೂರ್ಯದೇವನಿಗೆ ನಮಃ

**॥ ಓಂ ಪರಾಯ ಜಿಹ್ವಾತ್ಮನೇ ವರುಣಾಯ ನಮಃ ಓಂ ॥೨೦॥**

ಸರ್ವೋತ್ಕೃಷ್ಟನಾದ, ಮಧುರಾದಿರಸಗ್ರಾಹಕವಾದ ನಾಲಿಗೆ ಹಾಗು ತದಭಿಮಾನಿ ವರುಣದೇವರ ಅಂತರ್ಯಾಮಿಯಾದ ವಿಷ್ಣುವಿಗೆ ಮತ್ತು ವರುಣದೇವರಿಗೆ ನಮಃ

**॥ ಓಂ ಪರಾಯ ಘ್ರಾಣಾತ್ಮನೇ ಅಶ್ವಿಭ್ಯಾಂ ನಮಃ ಓಂ ॥೨೧॥**

ಸರ್ವೋತ್ಕೃಷ್ಟನಾದ, ಗಂಧಜ್ಞಾನವನ್ನು ತಂದುಕೊಡುವ ಘ್ರಾಣೇಂದ್ರಿಯ (ಮೂಗು) ಹಾಗು ತದಭಿಮಾನಿ ಅಶ್ವಿನಿದೇವತೆಗಳ ಅಂತರ್ಯಾಮಿಯಾದ ವಿಷ್ಣುವಿಗೆ ಮತ್ತು ಅಶ್ವಿನಿದೇವತೆಗಳಿಗೆ ನಮಃ

**॥ ಓಂ ಪರಾಯ ವಾಗಾತ್ಮನೇ ವಹ್ನಯೇ ನಮಃ ಓಂ ॥೨೨॥**

ಸರ್ವೋತ್ಕೃಷ್ಟನಾದ, ವಾಗಿಂದ್ರಿಯ ಹಾಗು ತದಭಿಮಾನಿ ಅಗ್ನಿದೇವನ ಅಂತರ್ಯಾಮಿ ವಿಷ್ಣುವಿಗೆ ಮತ್ತು ಅಗ್ನಿದೇವರಿಗೆ ನಮಃ

**॥ ಓಂ ಪರಾಯ ಪಾಣ್ಯಾತ್ಮನೇ ದಕ್ಷಾಯ ನಮಃ ಓಂ ॥೨೩॥**

ಸರ್ವೋತ್ಕೃಷ್ಟನಾದ, ಹಸ್ತ ಹಾಗು ತದಭಿಮಾನಿ ದಕ್ಷಪ್ರಜಾಪತಿಯ ಅಂತರ್ಯಾಮಿಯಾದ ದಕ್ಷಪ್ರಜಾಪತಿಗೆ ನಮಃ

**॥ ಓಂ ಪರಾಯ ಪಾದಾತ್ಮನೇ ಜಯಂತಾಯ ನಮಃ ಓಂ ॥೨೪॥**

ಸರ್ವೋತ್ಕೃಷ್ಟನಾದ, ಪಾದ ಹಾಗು ತದಭಿಮಾನಿ ಇಂದ್ರಪುತ್ರ ಜಯಂತನ ಅಂತರ್ಯಾಮಿಯಾದ ವಿಷ್ಣುವಿಗೆ ಹಾಗು ಜಯಂತನಿಗೆ ನಮಃ

**॥ ಓಂ ಪರಾಯ ಪಾಯ್ವಾತ್ಮನೇ ಮಿತ್ರಾಯ ನಮಃ ಓಂ ॥೨೫॥**

ಸರ್ವೋತ್ಕೃಷ್ಟನಾದ, ಮಲವಿಸರ್ಜನಸಾಧನವಾದ ಪಾಯುನಾಮಕ ಇಂದ್ರಿಯ ಹಾಗು ತದಭಿಮಾನಿ ಮಿತ್ರನಾಮಕದೇವತೆಯ ಅಂತರ್ಯಾಮಿಯಾದ ವಿಷ್ಣುವಿಗೆ ಮತ್ತು ಮಿತ್ರದೇವತೆಗೆ ನಮಃ

**॥ ಓಂ ಪರಾಯ ಉಪಸ್ಥಾತ್ಮನೇ ಮನವೇ ನಮಃ ಓಂ ॥೨೬॥**

ಸರ್ವೋತ್ಕೃಷ್ಟನಾದ, ಗುಹ್ಯೇಂದ್ರಿಯ ಹಾಗು ತದಭಿಮಾನಿ ಸ್ವಾಯಂಭುವ ಮನುವಿನ ಅಂತರ್ಯಾಮಿಯಾದ ವಿಷ್ಣುವಿಗೆ ಹಾಗು ಸ್ವಾಯಂಭುವಮನುವಿಗೆ ನಮಃ

॥ ಓಂ ಪರಾಯ ಶಬ್ದಾತ್ಮನೇ ಬೃಹಸ್ಪತಯೇ ನಮಃ ಓಂ ॥೨೭॥

ಸರ್ವೋತ್ಕೃಷ್ಟನಾದ, ಶಬ್ದ ಹಾಗು ತದಭಿಮಾನಿ ಬೃಹಸ್ಪತ್ಯಾಚಾರ್ಯರ ಅಂತರ್ಯಾಮಿಯಾದ ವಿಷ್ಣು ಹಾಗು ಬೃಹಸ್ಪತ್ಯಾಚಾರ್ಯರಿಗೆ ನಮಃ. ''ಶಬ್ದನಾಮಾ ಬೃಹಸ್ಪತಿರುದಾಹೃತಃ'' ಎಂದು ತಂತ್ರಸಾರಸಂಗ್ರಹದಲ್ಲಿ ಆಚಾರ್ಯರು ಹೇಳಿರುವದ-ರಿಂದ ಬೃಹಸ್ಪತಯೇ ನಮಃ ಎಂಬ ಪಾಠವು ಸಮೀಚನವಾಗಿದೆ.

ವಿಶೇಷ :- 'ಬೃಹಸ್ಪತಿಪ್ರಾಣಾಭ್ಯಾಂ' ಎಂಬ ಪಾಠವಿದ್ದ ಪಕ್ಷದಲ್ಲಿ ಪ್ರಾಣಪದದಿಂದ ರುದ್ರಪುತ್ರಪ್ರಾಣನನ್ನು ತೆಗೆದುಕೊಳ್ಳಬೇಕು. ''ಶಬ್ದಾದ್ಯಾಃ ಪಂಚ ಶಿವಜಾಃ'' ಎಂಬ ಗೀತಾತಾತ್ಪರ್ಯವಚನವು ಈ ವಿಷಯದಲ್ಲಿ ಪ್ರಮಾಣವಾಗಿದೆ. ಗೀತಾತಾತ್ಪರ್ಯ-ದಲ್ಲಿರುವ ಶಿವಜ ಪದದಿಂದ ಶಿವಪುತ್ರರಾದ ಪ್ರಾಣಾದಿಪಂಚಪುತ್ರರನ್ನು ತೆಗೆದುಕೊಳ್ಳಬೇಕು. ಹೀಗೆಯೇ ಸ್ಪರ್ಶಾದಿಗಳ ವಿಷಯದಲ್ಲಿ ದ್ವಿವಚನಾಂತವಾದ 'ಅಪಾನಾಭ್ಯಾಂ ವ್ಯಾನಾಭ್ಯಾಂ' ಇತ್ಯಾದಿಪಾಠವಿದ್ದ ಪಕ್ಷದಲ್ಲಿ ವಾಯುಪುತ್ರ ಹಾಗು ರುದ್ರಪುತ್ರರನ್ನು ಪರಿಗ್ರಹಿಸಬೇಕು. 'ಅಪನಾಯ ವ್ಯಾನಾಯ' ಇತ್ಯಾದಿ ಏಕವಚನಾಂತ ಪಾಠವಿದ್ದ ಪಕ್ಷದಲ್ಲಿ ಕೇವಲ ವಾಯುಪುತ್ರರನ್ನು ತೆಗೆದುಕೊಳ್ಳಬೇಕೆಂಬುವುದು ವ್ಯಾಖ್ಯಾನಕಾರರ ಅಭಿಪ್ರಾಯ.

॥ ಓಂ ಪರಾಯ ಸ್ಪರ್ಶಾತ್ಮನೇ ಅಪಾನಾಯ ನಮಃ ಓಂ ॥೨೮॥

ಸರ್ವೋತ್ಕೃಷ್ಟನಾದ, ಸ್ಪರ್ಶ ಹಾಗು ತದಭಿಮಾನಿ ವಾಯುಪುತ್ರ ಅಪಾನನಾಮಕ ವಾಯುವಿನ ಅಂತರ್ಯಾಮಿಯಾದ ವಿಷ್ಣು ಹಾಗು ಅಪಾನನಾಮಕ ವಾಯುದೇವತೆಗೆ ನಮಃ.

॥ ಓಂ ಪರಾಯ ರೂಪಾತ್ಮನೇ ವ್ಯಾನಾಯ ನಮಃ ಓಂ ॥೨೯॥

ಸರ್ವೋತ್ಕೃಷ್ಟನಾದ, ರೂಪ ಹಾಗು ತದಭಿಮಾನಿ ವಾಯುಪುತ್ರ ವ್ಯಾನನಾಮಕ ವಾಯುವಿನ ಅಂತರ್ಯಾಮಿಯಾದ ವಿಷ್ಣು ಹಾಗು ವ್ಯಾನನಾಮಕ ವಾಯುದೇವತೆಗೆ ನಮಃ.

॥ ಓಂ ಪರಾಯ ರಸಾತ್ಮನೇ ಉದಾನಾಯ ನಮಃ ಓಂ ॥೩೦॥

ಸರ್ವೋತ್ಕೃಷ್ಟನಾದ, ರಸ ಹಾಗು ತದಭಿಮಾನಿ ವಾಯುಪುತ್ರ ಉದಾನನಾಮಕ ವಾಯುದೇವತೆಯ ಅಂತರ್ಯಾಮಿಯಾದ ವಿಷ್ಣು ಹಾಗು ಉದಾನ ನಾಮಕವಾಯು-ದೇವತೆಗೆ ನಮಃ.

॥ ಓಂ ಪರಾಯ ಗಂಧಾತ್ಮನೇ ಸಮಾನಾಯ ನಮಃ ಓಂ ॥೩೧॥

ಸರ್ವೋತ್ಕೃಷ್ಟನಾದ, ಗಂಧ ಹಾಗು ತದಭಿಮಾನಿ ಸಮಾನನಾಮಕ ವಾಯುವಿನ ಅಂತರ್ಯಾಮಿಯಾದ ವಿಷ್ಣು ಹಾಗು ಸಮಾನವಾಯುದೇವತೆಗೆ ನಮಃ.

**॥ ಓಂ ಪರಾಯ ಆಕಾಶಾತ್ಮನೇ ಗಣಪತಯೇ ನಮಃ ಓಂ ॥೩೨॥**

ಸರ್ವೋತ್ಕೃಷ್ಟನಾದ, ಆಕಾಶ ಹಾಗು ತದಭಿಮಾನಿ ಗಣಪತಿಯ ಅಂತರ್ಯಾಮಿಯಾದ ವಿಷ್ಣುವಿಗೆ ಹಾಗು ಗಣಪತಿಗೆ ನಮಃ.

**॥ ಓಂ ಪರಾಯ ವಾಯ್ವಾತ್ಮನೇ ವಾಯವೇ ನಮಃ ಓಂ ॥೩೩॥**

ಸರ್ವೋತ್ಕೃಷ್ಟನಾದ, ವಾಯು ಹಾಗು ತದಭಿಮಾನಿ ಮರೀಚಿನಾಮಕ ವಾಯುದೇವತೆಯ ಅಂತರ್ಯಾಮಿಯಾದ ವಿಷ್ಣು ಹಾಗು ಮರೀಚಿನಾಮಕ ವಾಯುದೇವತೆಗೆ ನಮಃ.

ಪ್ರಧಾನವಾಯುಜೋ ಭೂತವಾಯುರ್ನಾಮ್ನಾ ಮರೀಚಕಃ ।

ಎಂಬ ವಚನವು ಈ ವಿಷಯದಲ್ಲಿ ಪ್ರಮಾಣವಾಗಿರುತ್ತದೆ. 'ವಾಯ್ವಾತ್ಮನೇ ಪ್ರವಹಾಯವೇ ನಮಃ' ಎಂಬ ಪಾಠಾಂತರವೂ ಇರುತ್ತದೆ.

**॥ ಓಂ ಪರಾಯ ತೇಜ ಆತ್ಮನೇ ವಹ್ನಯೇ ನಮಃ ಓಂ ॥೩೪॥**

ಸರ್ವೋತ್ಕೃಷ್ಟನಾದ, ತೇಜಸ್ಸು ಹಾಗು ತದಭಿಮಾನಿ ಅಗ್ನಿದೇವತೆಯ ಅಂತರ್ಯಾಮಿಯಾದ ವಿಷ್ಣು ಹಾಗು ಅಗ್ನಿದೇವತೆಗೆ ನಮಃ.

**॥ ಓಂ ಪರಾಯ ಅಬಾತ್ಮನೇ ವರುಣಾಯ ನಮಃ ಓಂ ॥೩೫॥**

ಸರ್ವೋತ್ಕೃಷ್ಟನಾದ, ಜಲ ಹಾಗು ತದಭಿಮಾನಿ ವರುಣದೇವತೆಯ ಅಂತರ್ಯಾಮಿಯಾದ ವಿಷ್ಣು ಹಾಗು ವರುಣದೇವತೆಗೆ ನಮಃ.

**॥ ಓಂ ಪರಾಯ ಪೃಥಿವ್ಯಾತ್ಮನೇ ಧರಾಯೈ ನಮಃ ಓಂ ॥೩೬॥**

ಸರ್ವೋತ್ಕೃಷ್ಟನಾದ, ಭೂಮಿ ಹಾಗು ತದಭಿಮಾನಿ ಧರಾನಾಮಕ ಲಕ್ಷ್ಮಿಯ ಅಂತರ್ಯಾಮಿಯಾದ ವಿಷ್ಣುವಿಗೆ ಹಾಗು ಧರಾನಾಮಕ ಲಕ್ಷ್ಮೀದೇವಿಗೆ ನಮಃ.

ವಿಶೇಷ :- ಕೆಲವರು 'ತತಃ ಶನಿಃ ಪೃಥಿವ್ಯಾತ್ಮಾ' ಎಂಬ ಷಟ್ಪ್ರಶ್ನೋಪನಿಷದ್ಭಾಷ್ಯ ವಚನವನ್ನು ಪ್ರಮಾಣವನ್ನಾಗಿ ಉದಾಹರಿಸಿ 'ಶನೈಶ್ಚರಧರಾಭ್ಯಾಂ ನಮಃ' ಎಂದೂ ಹೇಳುವುದುಂಟು. ಆದರೆ ಶನೈಶ್ಚರನು ಬ್ರಹ್ಮಾಂಡ ಒಳಗಿರುವ ಭೂಲೋಕಕ್ಕೆ ಜೀವನ ಷೋಡಶಕಲಾಗಳಲ್ಲಿ ಒಂದಾದ ಭೂಭಾಗಕ್ಕೆ ಅಭಿಮಾನಿಯೇ ಹೊರತು ಬ್ರಹ್ಮಾಂಡದ ಹೊರಗಿರುವ ಭೂತತ್ತ್ವಕ್ಕೆ ಅಲ್ಲ ಎಂದು 'ಶ್ರೀವಾದಿರಾಜಸ್ವಾಮಿಗಳು' ಷಟ್ಪ್ರಶ್ನಭಾಷ್ಯ-ವ್ಯಾಖ್ಯಾನದಲ್ಲಿ ಹೇಳಿರುತ್ತಾರೆ ಎಂಬುವುದು ಕೆಲವರ ಅಭಿಪ್ರಾಯ.

ಇಲ್ಲಿಗೆ ತತ್ತ್ವದೇವತಾಮಂತ್ರ ವ್ಯಾಖ್ಯಾನವು ಮುಗಿಯಿತು.

## ತಂತ್ರಸಾರಚತುರ್ಥಾಧ್ಯಾಯೋಕ್ತ ೭೨ ಮಂತ್ರಗಳು

### ೧. ವರಾಹಮಂತ್ರ

ತತ್ತ್ವಮಂತ್ರಗಳನ್ನು ಹೇಳಿದ ನಂತರದಲ್ಲಿ 'ತಂತ್ರಸಾರಸಂಗ್ರಹ'ದ ಚತುರ್ಥಾ-ಧ್ಯಾಯದಲ್ಲಿ ಹೇಳಿದ ಮಂತ್ರಗಳನ್ನು ಹೇಳ ಬಯಸಿ 'ವರಾಹಮಂತ್ರಾ'ಪೇಕ್ಷಯಾ ಮತ್ಸ್ಯಕೂರ್ಮಮಂತ್ರಗಳನ್ನು ಹೇಳಬೇಕಾಗಿದ್ದರೂ ಮತ್ಸ್ಯಕೂರ್ಮಾವತಾರಗಳು ಚಾಕ್ಷುಷ ಮನ್ವಂತರದಲ್ಲಿ ಆಗಿರುವುದರಿಂದ ಆ ಮಂತ್ರಗಳು ಆ ಕಾಲದಲ್ಲಿ ಜಪಿಸಲು ಅರ್ಹವಾಗಿರುವುದರಿಂದ ಅವುಗಳನ್ನು ಹೇಳದೇ ಈ ಕಲ್ಪವು ವರಾಹಕಲ್ಪವಾಗಿರುವು-ದರಿಂದ ಮೊದಲಿಗೆ ಈ ಕಲ್ಪಕ್ಕೆ ಸಂಬಂಧಪಟ್ಟ 'ವರಾಹಮಂತ್ರ'ವನ್ನು ಹೇಳುತ್ತಾರೆ.

**ಓಂ ಹೂಂ ನಮೋ ಭಗವತೇ ವರಾಹರೂಪಾಯ ಭೂರ್ಭುವಃ**

**ಸ್ವಃಪತಯೇ ಭೂಪತಿತ್ವಂ ಮೇ ದೇಹಿ ದಾದಾಪಯ ಸ್ವಾಹಾ ಓಂ ॥**

ಹೇ ಯಜ್ಞದಲ್ಲಿ ಆಹ್ವಾನಿಸಲ್ಪಡುವವನೇ! ಎಲ್ಲ ಜಗತ್ತನ್ನು ತನ್ನ ಆಹುತಿಯನ್ನಾಗಿ ಮಾಡಿಕೊಂಡವನೇ ! ಮತ್ತು ಹೇ ಆನಂದಸ್ವರೂಪನೇ ! ಷಡ್ಗುಣೈಶ್ವರ್ಯಸಂಪನ್ನನಾದ ನೀನು ೧.ಭಕ್ತಶ್ರೇಷ್ಠರಾದ ಹಾಗು ದೇವಶ್ರೇಷ್ಠರಾದ ವಾಯುದೇವರನ್ನು ಎಂದೂ ಬಿಡದಿರುವುದರಿಂದ, ಮತ್ತು ೨.ನೀನು ಹಾಗು ನಿನ್ನ ಭಕ್ತರಾದ ಬ್ರಹ್ಮಾದಿದೇವತೆಗಳು ಭಕ್ತರಿಗೆ ಕೊಟ್ಟ ವರವನ್ನು ಸತ್ಯ ಮಾಡುವುದರಿಂದ, ೩.ಅಯೋಗ್ಯರಾದ ಅಸುರರಿಗೆ ಬ್ರಹ್ಮಾದಿಗಳು ಕೊಟ್ಟ ವರವನ್ನು ಕೆಲವು ಬಾರಿ ಸುಳ್ಳು ಮಾಡುವುದರಿಂದ, ೪. ಜ್ಞಾನಸುಖಗಳನ್ನು ಪರಿಪೂರ್ಣವಾಗಿ ಪಡೆದುದರಿಂದ, ೫.ಸಾಧುಜನರಿಂದ ಸೇವ್ಯನಾಗಿ ಆತ ಏವ ಅವರಿಂದ ಅಪರಿತ್ಯಾಜ್ಯನಾದುದರಿಂದ 'ವರಾಹ' ಎಂಬ ಶಬ್ದದಿಂದ ವಾಚ್ಯನು. ಭೂಲೋಕ ಭುವರ್ಲೋಕ ಸ್ವರ್ಲೋಕಗಳಿಗೆ ಪಾಲಕನಾದ 'ವರಾಹ' ರೂಪಿಯಾದ ನಿನಗೆ ನಮಃ. ನೀನು ನನಗೆ ಭೂಮಿಯ ಒಡೆತನವನ್ನು ಹಾಗು ಭೂಉಪಲಕ್ಷಿತ ೨೪ ತತ್ತ್ವಾತ್ಮಕವಾದ ದೇಹದ ಸ್ವಾಮಿತ್ವವನ್ನು 'ವ್ಯಾಹೃತಿ'ಮಂತ್ರದಲ್ಲಿ ತಿಳಿಸಿದಂತೆ ಭೂಶಬ್ದವಾಚ್ಯನಾದ ವಾಸುದೇವರೂಪಿಯಾದ ನಿನ್ನ ಭಕ್ತನಾಗುವ ಭಾಗ್ಯವನ್ನು ಕೊಡು. ಹಾಗು ತತ್ತ್ವಾಭಿಮಾನಿಗಳಿಂದ ಕೊಡಿಸು.

**ವಿಶೇಷ :-** ಕೆಲವರು ಈ ಮಂತ್ರದಲ್ಲಿರುವ 'ದಾದಾಪಯ' ಎಂಬ ಪದದ ಸ್ಥಾನದಲ್ಲಿ 'ದದಾಪಯ'ಎಂಬುವುದಾಗಿ ಪದವನ್ನು ಪ್ರಯೋಗಿಸುತ್ತಾರೆ ಮತ್ತು ತೈತ್ತಿರೀಯ ಮಹಾನಾರಾಯಣೋಪನಿಷತ್ತಿನಲ್ಲಿ 'ದೇಹಿ ದೇಹಿ ದದಾಪಯ' ಎಂಬುವುದಾಗಿಯೇ ಹೇಳಿರುವುದರಿಂದ 'ದದಾಪಯ' ಎಂಬ ಪಾಠವೇ ಸರಿ ಎಂಬ

ಯುಕ್ತಿಯನ್ನೂ ಹೇಳುತ್ತಾರೆ. ಆದರೂ ಶ್ರೀಮದುತ್ತರಾದಿಮಠಾಧೀಶರಾದ 'ಶ್ರೀಮತ್ಸತ್ಯ-ಸಂಕಲ್ಪಶ್ರೀಚರಣರು' 'ದಾದಾಪಯ' ಎಂಬುವುದಾಗಿಯೇ ಹೇಳಬೇಕೆಂದು ಕಂಠತಃ ಹೇಳಿರುವುದನ್ನು ಕೇಳಿರುವುದರಿಂದ 'ದಾದಾಪಯ' ಎಂಬ ಪಾಠವೇ ಸಂಪ್ರದಾಯಜ್ಞರಿಗೆ ಸಮ್ಮತ. ತದ್ವಿರುದ್ಧವಕ್ಯಗಳು ಸಂಪ್ರದಾಯಜ್ಞರಾಗದಿರುವುದರಿಂದ ಅವರು ಹೇಳುವ ಯುಕ್ತಿಯು ಅಸ್ವರಸವಾಗಿದೆ. 'ಆಧಿಕ್ಯೇಽಧಿಕಂ' ಎಂಬ ಸೂತ್ರವಿರುವುದರಿಂದ ಆಧಿಕ್ಯಾರ್ಥದಲ್ಲಿ ಆದ್ಯಾಕ್ಷರಾಧಿಕ್ಯ ಬಂದು 'ದಾದಾಪಯ' ಎಂಬ ರೂಪವು ಸಿದ್ಧವಾಗಿದೆ. ಮತ್ತು 'ವಾಸುದೇವಭಕ್ತನಾಗುವಿಕೆ'ಯೆಂಬ ಗುಣವವನ್ನು ಅಧಿಕವಾಗಿ ಪ್ರಾರ್ಥಿಸುವುದು ಶಾಸ್ತ್ರಸಮ್ಮತವಾಗಿರುವುದರಿಂದ 'ದಾದಾಪಯ' ಎಂಬ ಪಾಠವೇ ಸಮಂಜಸವೆಂದು ಶ್ರೀ. ಪಾಂಫ್ರಿ ಶ್ರೀನಿವಾಸಾಚಾರ್ಯರು ತಿಳಿಸಿದ್ದಾರೆ.

### ೨ ಅಷ್ಟಾಕ್ಷರ ವರಾಹಮಂತ್ರ

**॥ ಓಂ ಓಂ ಹೂಂ ವರಾಹಾಯ ನಮ ಓಂ ॥**

ಹವನೋದ್ದೇಶ್ಯರಾದುದರಿಂದ 'ಹು' ಎಂಬ ಶಬ್ದದಿಂದ ವಾಚ್ಯರಾದ ಇಂದ್ರಾದಿ-ದೇವತೆಗಳನ್ನು ರಕ್ಷಿಸುವ,ಶ್ರೇಷ್ಠವಾದ ಅಪೇಕ್ಷಣೀಯವಾದ ಅತ ಏವ ಅಪರಿತ್ಯಾಜ್ಯವಾದ ಶುಭಪ್ರದವಾದ ಸತ್ಕರ್ಮವುಳ್ಳವನಾದುದರಿಂದ 'ವರಾಹ'ಎಂಬ ಶಬ್ದದಿಂದ ವಾಚ್ಯನಾದ ವಿಷ್ಣುವಿಗೆ ನಮಃ

### ೩. ಚತುರ್ದಶಾಕ್ಷರ ವರಾಹಮಂತ್ರ

**॥ ಓಂ ನಮೋ ಭಗವತೇ ಮಹಾವರಾಹಾಯ ಸ್ವಾಹಾ ಓಂ ॥**

ಷಡ್ಗುಣೈಶ್ವರ್ಯಸಂಪನ್ನನಾದ ವಿಷ್ಣುವು ಬ್ರಹ್ಮದೇವರಿಂದ ವರ ಪಡೆದು ಪ್ರಬಲನು ಹಾಗು ಹಿರಣ್ಯಕಶಿಪುವಿನ ತಮ್ಮನೂ ಆದ ಹಿರಣ್ಯಾಕ್ಷನನ್ನು ಸ್ವಯಮೇವ ಸಂಹರಿಸಿದ ಕಾರಣ 'ಮಹಾವರಾಹ' ಎಂಬ ಶಬ್ದದಿಂದ ವಾಚ್ಯನು. ಆ ಭಗವಂತನಿಗೆ 'ನಮಃ' ಎಂಬ ನನ್ನ ಪ್ರಾರ್ಥನಾ ರೂಪವಾದ ಮಾತು ಇರಲಿ.

ಸಂಪತ್ಪ್ರದವಾದ ಶ್ರೀಕರಾಷ್ಟಾಕ್ಷರಮಂತ್ರವನ್ನು ಹೇಳುತ್ತಾರೆ.

### ೪. ಅಷ್ಟಾಕ್ಷರ ಶ್ರೀಕರಮಂತ್ರ

**॥ ಓಂ ಉತ್ತಿಷ್ಠ ಶ್ರೀಕರ ಸ್ವಾಹಾ ಓಂ ॥**

ಮೋಕ್ಷವೆಂಬ ಧನದಿಂದ ತನ್ನವರನ್ನು ಯುಕ್ತರನ್ನಾಗಿ ಮಾಡುವುದರಿಂದ ಸ್ವಾಹಾ ಎಂಬ ಶಬ್ದದಿಂದ ವಾಚ್ಯನಾದ ೧.ಸಂಪತ್ಪ್ರದನಾದುದರಿಂದ ೨.ಲಕ್ಷ್ಮೀದೇವಿಗೆ

ಸುಖಪ್ರನಾದುದರಿಂದ ೩.ಲಕ್ಷ್ಮೀಬ್ರಹ್ಮರ ಜೊತೆಗೆ ರಮಮಾಣನಾದುದರಿಂದ ೪.ಭಾರತೀದೇವಿ ವಾಯುದೇವರು ಇವರಿಬ್ಬರನ್ನು ಪರಸ್ಪರ ಸುಖಿಸುವಂತೆ ಮಾಡುವವನಾದುದರಿಂದ ೫.ಲಕ್ಷ್ಮೀದೇವಿಯಲ್ಲಿ ತನ್ನ ಅನುಗ್ರಹ ಹಸ್ತವನ್ನು ಇಟ್ಟಿರುವುದರಿಂದ ೬.ಲಕ್ಷ್ಮೀದೇವಿಯ ಕರಗಳನ್ನು ಆಲಿಂಗನಸಾಧನತ್ವೇನ ಪಡೆದುದರಿಂದ (ಲಕ್ಷ್ಮೀದೇವಿಯ ಕರಗಳಿಂದ ಆಲಿಂಗಿತನಾದುದರಿಂದ ) 'ಶ್ರೀಕರ' ಎಂಬ ಶಬ್ದದಿಂದ ವಾಚ್ಯನಾದ ಹೇ ವಿಷ್ಣುವೇ ನನಗೆ ಸಂಪತ್ತನ್ನು ಕೊಡುವುದಕ್ಕೆ ಉದ್ಯುಕ್ತನಾಗು.

ಅಪಮೃತ್ಯು ಇಲ್ಲದಿದ್ದರೆ ಬದುಕಿರುವಪರ್ಯಂತ ಸಂಪತ್ತಿನ ಉಪಯೋಗವನ್ನು ಮಾಡಿಕೊಳ್ಳಲು ಶಕ್ಯವಾಗುತ್ತದೆ. ಆದ್ದರಿಂದ ಸಂಪತ್ತಿನ ಉಪಯೋಗಕ್ಕಾಗಿ ಬದುಕಿನ ಆವಶ್ಯಕತೆ ಇರುವುದರಿಂದ ಅಪಮೃತ್ಯುವನ್ನು ಪರಿಹರಿಸಿ ಬದುಕನ್ನು ಕೊಡುವ ಶ್ರೀನರಸಿಂಹಮಂತ್ರವನ್ನು ಹೇಳುತ್ತಾರೆ.

### ೫. ನರಸಿಂಹಮಂತ್ರ

'ಓಂ ಉಗ್ರಂ ವೀರಂ ಮಹಾವಿಷ್ಣುಂ ಜ್ವಲಂತಂ ಸರ್ವತೋಮುಖಮ್ ।
ನೃಸಿಂಹಂ ಭೀಷಣಂ ಭದ್ರಂ ಮೃತ್ಯುಮೃತ್ಯುಂ ನಮಾಮ್ಯಹಮ್ ಓಂ'॥

ನರಸಿಂಹ ದೇವರು ದುಷ್ಟರ ವಿಷಯದಲ್ಲಿ ಉಗ್ರರು. ರುದ್ರದೇವರನ್ನು ಪ್ರಲಯ ಕಾಲದಲ್ಲಿ ಗ್ರಸನಮಾಡುವವರು. ಗಂಭೀರವಾದ ವಾಣಿಯುಳ್ಳವರು. ಗರುಡದೇವರನ್ನು ಪ್ರೇರೇಪಿಸುವವರು. ಸರ್ವತ್ರ ವಿಶೇಷತಃ ಸಂಚರಿಸುವವರು. ಲಕ್ಷ್ಮೀದೇವಿಯನ್ನು ಪ್ರೇರೇಪಿಸುವವರು. ಮಹಾವ್ಯಾಪಕರು. ಮಹಾಪಕ್ಷಿಯಾದ ಗರುಡದೇವರನ್ನು ವಾಹನವನ್ನಾಗಿ ಪಡೆದವರು. ಸರ್ವತ್ರ ಪ್ರಕಾಶಮಾನರು. ಸರ್ವಶ್ರೇಷ್ಠರು. ಸರ್ವಗುಣ-ಪರಿಪೂರ್ಣರು. ಶತ್ರುಭಯಂಕರರು. ಮಂಗಲಸ್ವರೂಪರು., ಅಪಮೃತ್ಯುವಿನ ಮಾರಕರು. ಅಂತಹ 'ನರಸಿಂಹ' ದೇವರನ್ನು ನಾನು ನಮಸ್ಕರಿಸುತ್ತೇನೆ.

### ೬. ಚಾತುರ್ವಿಂಶತ್ಯಕ್ಷರ ನರಸಿಂಹಮಂತ್ರ

'ಓಂ ಜಯ ಜಯ ನರಸಿಂಹಾಯ ಸರ್ವಜ್ಞಾಯ
ಮಹಾತೇಜೋಬಲವೀರ್ಯಾಯ ಸ್ವಾಹಾ ಓಂ' ॥

ಸರ್ವಜ್ಞರಾದ ಅನವಧಿಕಪ್ರಕಾಶನಶಕ್ತಿ ಹಾಗು ಶೌರ್ಯವುಳ್ಳ ನರಸಿಂಹದೇವರಿಗೆ ತತ್ಪ್ರೀತಿಗಾಗಿ 'ನಿನ್ನನ್ನು ತೋರಿಸು ನಿನ್ನನ್ನು ತೋರಿಸು' ಎಂಬ ಪ್ರಾರ್ಥನಾರೂಪವಾದ ನನ್ನ ಮಾತು ಇರಲಿ.

ಅಥವಾ 'ಜಯಜಯ' ಎಂಬುವುದನ್ನು ಸಂಬುದ್ಧ್ಯೇಕವಚನಾಂತಪದವಾಗಿ ವಿವಕ್ಷಿಸಿದಾಗ 'ಹೇ ಜಯಜಯ' ! ೧.ಹಿರಣ್ಯಕಶಿಪುವೇ ಮೊದಲಾದ ಶತ್ರುಗಳನ್ನು ಪರಾಭವಗೊಳಿಸುವ ಮೂಲಕ ಉತ್ಕೃಷ್ಟನಾದವನೇ ! ೨.ಜಯನಾಮಕ ದ್ವಾರಪಾಲಕನಲ್ಲಿ ಆವಿಷ್ಟನಾದ ಹಿರಣ್ಯಕಶಿಪುವನ್ನು ಜಯಿಸಿದವನೇ ! ೩.ಶತ್ರುಗಳನ್ನು ಪರಾಭವಗೊಳಿಸುವುದರಿಂದ ಉಂಟಾದ ಜಯವುಳ್ಳವನೇ ! ೪.ಜಯನಾಮಕ ದ್ವಾರಪಾಲಕನಿಂದ (ಹಿರಣ್ಯಕಶಿಪುಶರೀರದಲ್ಲಿ) ಜನಿಸಿದ ಪ್ರಹ್ಲಾದನಿಗೆ ಜ್ಞಾನಪ್ರದನೇ ! ಎಂಬ ಅರ್ಥವನ್ನು ಹೇಳಲು ಬರುತ್ತದೆ. ಈ ಪಕ್ಷದಲ್ಲಿ 'ಜಯಜಯ' ಎಂಬ ಪದವನ್ನು ಸಂಬುದ್ಧ್ಯೇಕವಚನಾಂತವಾಗಿ ಹಾಗೂ ಅದನ್ನು ಆವರ್ತನಮಾಡಿಕೊಂಡು ಎರಡು ಲೋಡಂತಕ್ರಿಯಾಪದಗಳನ್ನಾಗಿ ವಿವಕ್ಷಿಸಿ ಉಳಿದೆಲ್ಲ ನರಸಿಂಹಾಯ ಇತ್ಯಾದಿ ಪದಗಳ ಅರ್ಥವನ್ನು ಮೊದಲಿನಂತೆ ತಿಳಿಯಬೇಕು.

**೭.ನರಸಿಂಹಗಾಯತ್ರೀಮಂತ್ರ**

**॥ ಓಂ ನರಸಿಂಹಾಯ ವಿದ್ಮಹೇ ಮಹಾಬಲಾಯ ಧೀಮಹಿ ।**
**ತನ್ನೋಽನಂತಃ ಪ್ರಚೋದಯಾತ್ ಓಂ ॥**

ನಾವು ನರಸಿಂಹದೇವರ ಪ್ರೀತಿಗಾಗಿ ಅವರನ್ನು ತಿಳಿಯುತ್ತೇವೆ. ಅಪಾರಬಲವುಳ್ಳ ಅವರನ್ನು ಧ್ಯಾನಿಸುತ್ತೇವೆ ಆದ್ದಿರಂದ ದೇಶತಃ ಕಾಲತಃ ಗುಣತಃ ಎಲ್ಲೆ ಇಲ್ಲದ ಆ ನರಸಿಂಹ ದೇವರು ನಮ್ಮನ್ನು ಸತ್ಕರ್ಮಗಳಲ್ಲಿ ಪ್ರೇರಿಸಲಿ.

ಮೃತ್ಯುನಾಶಕರಾದ ನರಸಿಂಹದೇವರ ಮೂರು ಮಂತ್ರಗಳನ್ನು ಹೇಳಿದ ನಂತರ ಬದುಕಿಗೆ ಶ್ವಾಸೋಚ್ಛ್ವಾಸವು ಆವಶ್ಯಕವಾಗಿರುವುದರಿಂದ ಅದರ ಸಾರ್ಥಕ್ಯಕ್ಕಾಗಿ ಷಡಕ್ಷರಹಂಸಮಂತ್ರವನ್ನು ಹೇಳುತ್ತಾರೆ.

**೮. ಷಡಕ್ಷರ ಹಂಸ ಮಂತ್ರ**

**॥ ಓಂ ಹಂಸಸ್ಸೋಽಹಂ ಸ್ವಾಹಾ ಓಂ ॥**

೧.ಶತ್ರುಗಳನ್ನು ಸಂಹರಿಸುವುದರಿಂದ ೨.ಸರ್ವತ್ರ ವ್ಯಾಪ್ತನಾದುದರಿಂದ ೩.ಸರ್ವಜ್ಞನಾದುದರಿಂದ ೪.ಪೂರ್ವಶರೀರವನ್ನು ತ್ಯಜಿಸಿ ಹೊಸಶರೀರವನ್ನು ಹೊಂದುವ ಕಾರಣ 'ಹಂಸ' ಶಬ್ದವಾಚ್ಯನಾದ ಜೀವನ ಸೃಷ್ಟಿಗೆ ನಿಮಿತ್ತಕಾರಣನಾದುದರಿಂದ ಹಂಸಶಬ್ದವಾಚ್ಯನಾದ ಭಗವಂತನ ಪ್ರತಿಬಿಂಬನು ನಾನಾಗಿದ್ದೇನೆ. ಆ ಭಗವಂತನು ತನ್ನ ಭಕ್ತರನ್ನು ಬಿಡದಿರುವುದರಿಂದ ಅಥವಾ ಭಕ್ತರನ್ನು ಹಿಂಸಿಸದಿರುವುದರಿಂದ ಸ್ವಾಹಾ ಎಂಬ ಶಬ್ದವಾಚ್ಯನು.

ವಿಶೇಷ :- ಸಃ ಎಂಬ ಪ್ರಥಮಾವಿಭಕ್ತಿಯನ್ನು 'ಸಪ್ತಸು ಪ್ರಥಮಾ' ಎಂಬ ವ್ಯಾಕರಣಸೂತ್ರ ಪ್ರಕಾರ ಷಷ್ಠ್ಯೀವಿಭಕ್ತ್ಯರ್ಥದಲ್ಲಿ ಉಚ್ಚರಿಸಿದ್ದಾರೆಂದು ತಿಳಿಯಬೇಕು. ತಾನು ಭಗವಂತನ ಪ್ರತಿಬಿಂಬನು ಎಂದು ಉಪಾಸಿಸುವುದು ಎಲ್ಲ ಜೀವರಿಗೂ ಆವಶ್ಯಕ. ಅಥವಾ ಪ್ರಥಮಾವಿಭಕ್ತ್ಯರ್ಥವನ್ನೇ ಇಟ್ಟುಕೊಂಡಾಗ ಸಃ ಅಂತಹ ಪರಮಾತ್ಮನು ಅಹಂ ಭಕ್ತರಿಂದ ಅಹೇಯನು (ಅಪರಿತ್ಯಾಜ್ಯನು) ಎಂಬ ಅರ್ಥವನ್ನು ಹೇಳಬೇಕು.

## ೯. ಸಪ್ತಾಕ್ಷರ ಹಂಸ ಮಂತ್ರ

॥ ಓಂ ಓಂ ಹಂಸಸ್ಸೋऽಹಂ ಸ್ವಾಹಾ ಓಂ ॥

ಗುಣಪೂರ್ಣನಾದ ಪೂರ್ವಮಂತ್ರದಲ್ಲಿ ಹೇಳಿದ ಹಂಸಶಬ್ದಾರ್ಥವಿಶಿಷ್ಟನಾದ ಭಗವಂತನ ಪ್ರತಿಬಿಂಬನು ಹಾಗು ದಾಸನು ನಾನು. ಎಂಬ ಮಾತು ಬಗವಂತನ ವಿಷಯದಲ್ಲಿ ಇರಲಿ.

## ೧೦. ಅಷ್ಟಾಕ್ಷರ ಹಂಸ ಮಂತ್ರ

॥ ಓಂ ಓಂ ಹ್ರೀಂ ಹಂಸಸ್ಸೋऽಹಂ ಸ್ವಾಹಾ ಓಂ ॥

೧.ಪಾಪವನ್ನು ಪರಿಹರಿಸಿ ಭಕ್ತರ ಹೃದಯಮಂದಿರಕ್ಕೆ ಬರುವವನು ೨.ಭಕ್ತರ ಅನುಗ್ರಹಕ್ಕಾಗಿ ಅವರ ಸಂಪತ್ತನ್ನು ಕಳೆದವನು ೩.ರುಕ್ಮಿಣೀದೇವೀರೂಪದಲ್ಲಿದ್ದ ಲಕ್ಷ್ಮೀದೇವಿಯನ್ನು ಕೃಷ್ಣರೂಪದಿಂದ ಅಪಹರಿಸಿದವನು ೪. ಲಜ್ಜೆಯುಳ್ಳವನು ಆದುದರಿಂದ ವಿಷ್ಣುವನ್ನು 'ಹ್ರೀಂ' ಎಂದು ಕರೆಯುತ್ತಾರೆ. ಉಳಿದೆಲ್ಲ ಅರ್ಥವನ್ನು ಪೂರ್ವದಂತೆ ತಿಳಿಯಬೇಕು.

ಹಂಸಮಂತ್ರವನ್ನು ಜಪಿಸಿ ಸಾರ್ಥಕಮಾಡಿಕೊಳ್ಳಬೇಕಾದ ಬದುಕಿಗೆ ಅನ್ನವು ಆವಶ್ಯಕ. ಆದ್ದರಿಂದ ಅನ್ನಪ್ರಾಪ್ತಿಗಾಗಿ ಈ ಅನ್ನಾಧಿಪತಿ ದಧಿವಾಮನರೂಪಿ ವಿಷ್ಣುವಿನ ಮಂತ್ರವನ್ನು ಹೇಳುತ್ತಾರೆ.

## ೧೧. ದಧಿವಾಮನ ಮಂತ್ರ (ಚಿಂತಾಮಣಿಮಂತ್ರ)

'ಓಂ ಓಂ ನಮೋ ಭಗವತೇ ವಿಷ್ಣವೇ ಅನ್ನಾಧಿಪತಯೇ ಸ್ವಾಹಾ ಓಂ'

ಗುಣಪೂರ್ಣನಾದ ಷಡ್ಗುಣ್ಯೈಶ್ವರ್ಯಸಂಪನ್ನನಾದ ಅನ್ನಾಧಿಪತಿಯಾದ ಅಥವಾ ಭೂಪಾಲಕನಾದ ಸರ್ವವ್ಯಾಪಕನಾದ ದಧಿವಾಮನ ನಾಮಕ ವಿಷ್ಣುವಿಗೆ ನಮಃ ಎಂಬ ನನ್ನ ಮಾತು ಇರಲಿ.

## ೧೨. ಅಷ್ಟಾಕ್ಷರ ವಾಮನಮಂತ್ರ

**॥ ಓಂ ಓಂ ವಂ ವಾಮನಾಯ ನಮಃ ಓಂ ॥**

ಗುಣಪೂರ್ಣನಾದ ಸುಖರೂಪನಾದ, ಬಲರೂಪನಾದ ಅಮೃತಸ್ವರೂಪನಾದ ಅತಿಶಯ ಸಂಪತ್ತು ಹಾಗು ಅತಿಶಯ ಸೌಂದರ್ಯವುಳ್ಳವನು ಆದುದಿರಂದ ವಾಮನ ಶಬ್ದವಾಚ್ಯನಾದ ವಾಮನರೂಪಿ ವಿಷ್ಣುವಿಗೆ ನಮಃ

ವಿಶೇಷ :- ಕೆಲವರು "ಅಮೃತಂ ಸ್ವಯಮುದ್ದೇಶ್ಯಯುತಸ್ಸಹೃದಯೋ ಮನುಃ" ಎಂಬ ತಂತ್ರಸಾರವಾಕ್ಯದಿಂದ "ಓಂ ಅಮೃತಾತ್ಮನೇ ನಮ ಓಂ" ಎಂಬುದಾಗಿ ಮಂತ್ರವನ್ನು ಉದ್ಧರಿಸಿ ಪಠಿಸುತ್ತಾರೆ. ಆ ಪಕ್ಷದಲ್ಲಿ ಗುಣಪೂರ್ಣನಾದ ನಾಶರಹಿತವಾದ ಸ್ವರೂಪವುಳ್ಳ ಮುಕ್ತರ ಅಂತರ್ಯಾಮಿಯಾದ ವಿಷ್ಣುವಿಗೆ ನಮಃ ಎಂಬುವುದಾಗಿ ಅಭಿಪ್ರಾಯವನ್ನು ಹೇಳಬೇಕು. ಎಂದು ಪಾಂಥ್ರಿ ಆಚಾರ್ಯರು ವ್ಯಾಖ್ಯಾನದಲ್ಲಿ ತಿಳಿಸಿದ್ದಾರೆ.

ಬಲಿಚಕ್ರವರ್ತಿಯ ಯಜ್ಞದಲ್ಲಿ ಎಲ್ಲರೂ ನೋಡುತ್ತಿರುವಾಗಲೇ ವಾಮನರೂಪಿ ವಿಷ್ಣುವು ತ್ರಿವಿಕ್ರಮನಾಗಿ ತೋರಿರುವುದರಿಂದ ವಾಮನ ಮಂತ್ರದ ಅನಂತರದಲ್ಲಿ ತ್ರಿವಿಕ್ರಮ ಮಂತ್ರವನ್ನು ಹೇಳುತ್ತಾರೆ.

## ೧೩. ತ್ರಿವಿಕ್ರಮ ಗಾಯತ್ರೀಮಂತ್ರ

**'ಓಂ ತ್ರಿವಿಕ್ರಮಾಯ ವಿದ್ಮಹೇ ವಿಶ್ವರೂಪಾಯ ಧೀಮಹಿ ತನ್ನೋ ವಿಷ್ಣುಃ ಪ್ರಚೋದಯಾತ್ ಓಂ ॥**

ಋಗ್ಯಜುಸ್ಸಾಮಾಖ್ಯ ವೇದತ್ರಯಗಳನ್ನು ಅತೀತ ಅನಾಗತ ವರ್ತಮಾನಕಾಲ-ಗಳನ್ನು ಸತ್ವ ರಜಸ್ ತಮೋರೂಪ ತ್ರಿಗುಣಗಳನ್ನು ಭೂಃ ಭುವಃ ಸ್ವಃ ಎಂಬ ಮೂರು ಲೋಕಗಳನ್ನು ದೇವ-ಮಾನುಷ-ದಾನವರೂಪ ಜೀವರನ್ನು ಪದದಿಂದ ಕ್ರಮಿಸಿರುವುದರಿಂದ (ವ್ಯಾಪಿಸಿರುವುದರಿಂದ) ವಿಷ್ಣುವನ್ನು ತ್ರಿವಿಕ್ರಮನೆಂದು ಕರೆಯುತ್ತಾರೆ. ಅವನ ಪ್ರೀತಿಗಾಗಿ ಅವನನ್ನು ತಿಳಿಯುತ್ತೇವೆ. ಜಗತ್ತನ್ನೇ ತನ್ನ ಪ್ರತಿಮೆಯನ್ನಾಗಿ ಮಾಡಿಕೊಂಡ ಆ ವಿಷ್ಣುವನ್ನು ಧ್ಯಾನಿಸುತ್ತೇವೆ. ಆ ವಿಷ್ಣುವು ನಮ್ಮನ್ನು ತನ್ನ ಸೇವೆಗಾಗಿ ಪ್ರೇರಿಸಲಿ.

ವಿಷ್ಣುವು ತ್ರಿವಿಕ್ರಮ ಶಬ್ದವಾಚ್ಯನಾಗಿರುವುದಕ್ಕೆ ಕಾರಣವನ್ನು ತಿಳಿಸುವ ಸಂದರ್ಭದಲ್ಲಿ ಶ್ರೀಮದಾಚಾರ್ಯರು ಋಗ್‌ಭಾಷ್ಯದಲ್ಲಿ

ವೇದಾನ್‌ಕಾಲಾನ್ಗುಣಾನ್ಲೋಕಾನ್ ದೇವಮಾನುಷದಾನವಾನ್ ।
ಚೇತನಾಚೇತನಾನ್ಸರ್ವಾನ್ ಪದಾ ತ್ರೀಣಿ ವಿಚಕ್ರಮೇ"॥ ಎಂದು ಹೇಳಿರುತ್ತಾರೆ.

ದಶಾವತಾರಗಳಲ್ಲಿ ವಾಮನಾವತಾರನಂತರ ಪರಶುರಾಮಾವತಾರವಾಗಿರುವುದರಿಂದ ವಾಮನ ಮಂತ್ರವನ್ನು ಪ್ರಥಮತಃ ಹೇಳಿ ಪ್ರಸಂಗಾತ್ ಪ್ರಾಪ್ತವಾದ ತ್ರಿವಿಕ್ರಮಮಂತ್ರವನ್ನು ಹೇಳಿ ಪ್ರಕೃತದಲ್ಲಿ ಪರಶುರಾಮಮಂತ್ರವನ್ನು ಹೇಳುತ್ತಾರೆ.

### ೧೪. ಷಡಕ್ಷರ ಪರಶುರಾಮಮಂತ್ರ

॥ ಓಂ ರಾಂ ರಾಮಾಯ ನಮ ಓಂ ॥

ಕ್ರೀಡಾಯುಕ್ತನಾದ ಮತ್ತು ಅಗ್ನಿಬೀಜವಾದ "ರ" ಎಂಬ ಶಬ್ದದಿಂದ ವಾಚ್ಯನಾದ ಅಗ್ನಿಯಲ್ಲಿ ಆ ಚೆನ್ನಾಗಿ ಮ ಅಂತರ್ಗತನಾದುದರಿಂದ "ರಾಮ" ಎಂಬ ಶಬ್ದವಾಚ್ಯರಾದ 'ಪರಶುರಾಮ'ದೇವರಿಗೆ ನಮಃ

ಚೂಲೀಪತಿಃ ಸ್ವಯಂ ವಹ್ನಿಭಾರ್ಗವಸ್ತತ್ರ ದೇವತಾ ।

ಎಂಬ ಪಂಚರಾತ್ರಾಗಮವೇ ಮೊದಲಾದ ಪ್ರಮಾಣಗಳಿಂದ ಪರಶುರಾಮದೇವರು ಹೋಮಿಸುವ ಭಕ್ತರ ಅನುಗ್ರಹಕ್ಕಾಗಿ ಅಗ್ನ್ಯಂತರ್ಗತರು ಎಂಬುವುದು ಪ್ರಮಿತವಾಗಿರುತ್ತದೆ

### ೧೫. ಅಷ್ಟಾಕ್ಷರ ಪರಶುರಾಮ ಮಂತ್ರ

॥ ಓಂ ಓಂ ಭಾಂ ಭಾರ್ಗವಾಯ ನಮ ಓಂ ॥

ಸ್ವಯಂ ಪ್ರಕಾಶಮಾನನಾದ ಮತ್ತು ಎಲ್ಲರನ್ನು ಪ್ರಕಾಶಗೊಳಿಸುವ ನಕ್ಷತ್ರಗಳನ್ನು ಚಲಿಸುವಂತೆ ಮಾಡುವ ವಿಷ್ಣುವು ೧.ಭೃಗುವಂಶದಲ್ಲಿ ಅವತರಿಸಿದವನು ೨.ಗಾಯತ್ರೀ ಪ್ರತಿಪಾದ್ಯ ಸ್ವರೂಪವುಳ್ಳವನು, ೩.ರುದ್ರದೇವರಿಗೆ ಮಹತ್ತ್ವವನ್ನು ತಂದುಕೊಟ್ಟವನು ಆದುದರಿಂದ ಭಾರ್ಗವ ಎಂಬ ಶಬ್ದದಿಂದ ವಾಚ್ಯನು. ಅಂತಹ ಪರಶುರಾಮರೂಪಿ ವಿಷ್ಣುವಿಗೆ ನಮಃ

### ೧೬. ಏಕಾಕ್ಷರ ಪರಶುರಾಮಮಂತ್ರ

॥ ಓಂ ಭಾಂ ಓ ॥

'ನಮಃ' ಶಬ್ದವನ್ನು ಅಧ್ಯಾಹಾರ ಮಾಡಬೇಕು. ಹೀಗೆಯೇ 'ನಮಃ' ಶಬ್ದ ಇಲ್ಲದಿದ್ದ ಎಲ್ಲ ಸ್ಥಳಗಳಲ್ಲೂ 'ನಮಃ' ಎಂಬ ಶಬ್ದವನ್ನು ಅಧ್ಯಾಹಾರ ಮಾಡಿಕೊಳ್ಳಬೇಕು. ಸ್ವಯಂ ಪ್ರಕಾಶಮಾನನು, ಜಗತ್ತನ್ನು ಪ್ರಕಾಶಗೊಳಿಸುವವನು, ಹಾಗೂ ನಕ್ಷತ್ರಗಳನ್ನು ಚಲಿಸುವಂತೆ ಮಾಡುವವನು. ಆದುದರಿಂದ ಭಾಂ ಎಂಬ ಶಬ್ದದಿಂದ ವಾಚ್ಯನಾದ ಪರಶುರಾಮದೇವರಿಗೆ ನಮಃ.

## ೧೭. ಷಡಕ್ಷರ ರಾಮಮಂತ್ರ

**॥ ಓಂ ರಾಂ ರಾಮಾಯ ನಮ ಓಂ ॥**

'ರ' ಶಬ್ದ ನಿಯಾಮಕನಾದ ಆನಂದಸ್ವರೂಪನಾದುದರಿಂದ ಸ್ವಾಶ್ರಿತರಿಗೆ ಆನಂದಪ್ರದನಾದುದರಿಂದ ದೇಶತಃ ಕಾಲತಃ ಗುಣತಃ ಪರಿಮಿತಿ ರಹಿತನಾದುದರಿಂದ ರಾಮಶಬ್ದವಾಚ್ಯನಾದ ರಾಮ ರೂಪಿ ವಿಷ್ಣುವಿಗೆ ನಮಃ

## ೧೮. ಅಷ್ಟಾಕ್ಷರ ರಾಮಮಂತ್ರ

**॥ ಓಂ ಓಂ ರಾಂ ರಾಘವಾಯ ನಮ ಓಂ ॥**

ಗುಣಪೂರ್ಣನಾದ ರ ಶಬ್ದ ನಿಯಾಮಕ ವಿಷ್ಣುಸ್ವರೂಪನಾದ ೧.ರಘುವಂಶದಲ್ಲಿ ಅವತರಿಸಿದುದರಿಂದ ಮತ್ತು ೨.ಪರಶುರಾಮದೇವರಿಂದ ವರವನ್ನು ಪಡೆದು ಅವರ ಹೃದಯದಲ್ಲಿ ಸ್ಥಿತನಾದ ಪಾಪಸ್ವರೂಪಿ ತಪೋನಾಮಕ ದೈತ್ಯನನ್ನು ತಿಳಿದು ಸಂಹರಿಸಿದುದರಿಂದ ರಾಘವ ಎಂಬ ಶಬ್ದದಿಂದ ಕರೆಯಲ್ಪಡುವ ವಿಷ್ಣುವಿಗೆ ನಮಃ

## ೧೯. ಏಕಾಕ್ಷರ ರಾಮಮಂತ್ರ

**॥ ಓಂ ರಾಂ ಓಂ ॥**

ನಮಃ ಶಬ್ದವನ್ನು ಅಧ್ಯಾಹಾರ ಮಾಡಿಕೊಳ್ಳಬೇಕು. 'ರ' ಶಬ್ದನಿಯಾಮಕ ವಿಷ್ಣುಸ್ವರೂಪನಾದ ಶ್ರೀರಾಮಚಂದ್ರನಿಗೆ ನಮಃ .

## ೧೯. ಅಷ್ಟಾದಶಾಕ್ಷರ ಶ್ರೀಕೃಷ್ಣಮಂತ್ರ

**॥ ಓಂ ಕ್ಲೀಂ ಕೃಷ್ಣಾಯ ಗೋವಿಂದಾಯ ಗೋಪೀಜನವಲ್ಲಭಾಯ ಸ್ವಾಹಾ ಓಂ ॥**

೧.ಜೀವರಾಶಿಗಳನ್ನು ಬಂಧಿಸುವವನು ೨.ಪಾಪವನ್ನು ಕತ್ತರಿಸುವವನು ೩.ಸರ್ವಪಾಪವನ್ನು ತಿಳಿದವನು, ೪.ಭಕ್ತರ ಅಭೀಷ್ಟಗಳನ್ನು ಪೂರೈಸುವವನು ೫.ಸುಖ ಹಾಗೂ ಐಶ್ವರ್ಯವನ್ನು ಅತಿಶಯವಾಗಿ ಪಡೆದವನು ೬.ವಾಯುದೇವರನ್ನು ಲಯಕಾಲದಲ್ಲಿ ಸಾಕ್ಷಾತ್ತಾಗಿ ತನ್ನ ಉದರದಲ್ಲಿ ಹಾಕಿಕೊಂಡವನು ಆದ್ದರಿಂದ ವಿಷ್ಣು "ಕ್ಲೀಂ" ಎಂಬ ಬೀಜಾಕ್ಷರದಿಂದ ವಾಚ್ಯನು.

೧.ಸರ್ವಜಗತ್ತನ್ನು ಅಧಿಕಾರದಿಂದ ಕರ್ಷಣಮಾಡಿದವನು ಅರ್ಥಾತ್ ತನ್ನ ಅಧೀನವಲ್ಲಿಟ್ಟುಕೊಂಡಿರುವವನು ೨.ಭೂದೇವಿಗೆ ಸುಖ ಕೊಡುವವನು ಆದುದರಿಂದ ವಿಷ್ಣುವನ್ನು "ಕೃಷ್ಣ" ನೆಂದು ಕರೆಯುತ್ತಾರೆ.

೧.ಅವತಾರಕ್ಕಾಗಿ ಭೂಮಿಯನ್ನು ಆಶ್ರಯವನ್ನಾಗಿ ಪಡೆದವನು ೨.ಒಂದು ರೂಪದಿಂದ ಸ್ವರ್ಗದಲ್ಲಿ ಇರುವವನು ೩.ವೇದೈಕವೇದ್ಯನು ಆದುದರಿಂದ ವಿಷ್ಣುವನ್ನು "ಗೋವಿಂದನೆಂದು ಕರೆಯುತ್ತಾರೆ.

೧.ಗೋಪಿಯರಂತೆ ತನ್ನ ಅನುಗ್ರಹಕ್ಕಾಗಿ ಜನ್ಮತಾಳಿದ ಕುಬ್ಜೆಯನ್ನು ಅನುಗ್ರಹಿಸುವದಕ್ಕಾಗಿ ಅವಳನ್ನು ಹೊಂದಿದವನು ೨.ಗೋಪಿಕಾಸ್ತ್ರೀಯರಿಗೆ ಪ್ರಿಯನು ಆದುದರಿಂದ ಶ್ರೀಹರಿಯನ್ನು 'ಗೋಪಿಜನವಲ್ಲಭ'ನೆಂದು ಕರೆಯುತ್ತಾರೆ. ಇಂತಹ ಶ್ರೀಕೃಷ್ಣಪರಮಾತ್ಮನ ಪ್ರೀತಿಗಾಗಿ ಸ್ತೋತ್ರರೂಪವಾದ ನನ್ನ ಮಾತು ಇರಲಿ.

### ೨೧. ಷಡಕ್ಷರ ಕೃಷ್ಣಮಂತ್ರ

**॥ ಓಂ ಕ್ಲೀಂ ಕೃಷ್ಣಾಯ ನಮಃ ಓಂ ॥**

ಭಕ್ತಾಭಿಷ್ಟಪ್ರದಾನಾದಿ ಪೂರ್ವೋಕ್ತ ಗುಣವಿಶಿಷ್ಟನಾದ ಮೇಘವರ್ಣದಂತೆ ನೀಲ ವರ್ಣವುಳ್ಳ ಶ್ರೀಕೃಷ್ಣಪರಮಾತ್ಮನಿಗೆ ನಮಃ ।

### ೨೨. ಏಕಾಕ್ಷರ ಕೃಷ್ಣಮಂತ್ರ

**॥ ಓಂ ಕ್ಲೀಂ ಓಂ ॥**

ಇಲ್ಲಿ ನಮಃ ಶಬ್ದವನ್ನು ಅಧ್ಯಾಹಾರ ಮಾಡಬೇಕು. ಭಕ್ತಾಭಿಷ್ಟಪ್ರದನಾದ ಪೂರ್ವೋಕ್ತಗುಣವಿಶಿಷ್ಟನಾದ ಹೇ ಪರಮಾತ್ಮನೇ ನಿನಗೆ ನಮಃ ।

ಶ್ರೀಕೃಷ್ಣಮಂತ್ರವನ್ನು ಹೇಳಿದ ನಂತರ ಶ್ರೀಕೃಷ್ಣನ ಸಮಾನ ಕಾಲೀನ ವೇದವ್ಯಾಸ-ದೇವರ ಮಂತ್ರವನ್ನು ಹೇಳುತ್ತಾರೆ.

### ೨೩. ವೇದವ್ಯಾಸಮಂತ್ರ

**॥ ಓಂ ವ್ಯಾಂ ವೇದವ್ಯಾಸಾಯ ನಮಃ ಓಂ ॥**

೧.ವಿಶೇಷತಃ ಸರ್ವರ ಅಜ್ಞಾನ ನಾಶಕರೂ ಮತ್ತು ೨.ಸ್ವಯಂ ವಿಶೇಷತಃ ಸರ್ವವನ್ನರಿತವರೂ ಆದುದರಿಂದ ವೇದವ್ಯಾಸದೇವರನ್ನು "ವ್ಯಾಂ" ಎಂಬ ಬೀಜಾಕ್ಷರದಿಂದ ಕರೆಯುತ್ತಾರೆ.

.ವೇದವನ್ನು ಶಾಖಾಭೇದೇನ ವಿಭಾಗ ಮಾಡಿದವನು. ೨.ಅಧಿಕಾರಿಗಳಿಗೆ ತತ್ವಜ್ಞಾನವನ್ನು ಮಾಡಿಸುತ್ತಾ ಸರ್ವರಿಗಿಂತಲೂ ವಿಲಕ್ಷಣನು ಅಥವಾ ಸರ್ವತ್ರ ವ್ಯಾಪ್ತನು ಆಗಿರುವುದರಿಂದ ವಿಷ್ಣುವನ್ನು 'ವೇದವ್ಯಾಸ' ಶಬ್ದದಿಂದ ಕರೆಯುತ್ತಾರೆ. ಅಂತಹ ವೇದವ್ಯಾಸರೂಪಿ ಪರಮಾತ್ಮನಿಗೆ ನಮಃ

**೨೪. ವ್ಯಾಸಗಾಯತ್ರೀಮಂತ್ರ**

**"ಪೂರ್ಣಜ್ಞಾನಾಯ ವಿದ್ಮಹೇ ಪೂರ್ಣಾನಂದಾಯ ಧೀಮಹಿ ।**

**ತನ್ನೋ ವ್ಯಾಸಃ ಪ್ರಚೋದಯಾತ್ ಓಂ ॥**

ಪೂರ್ಣಜ್ಞಾನವುಳ್ಳ ವೇದವ್ಯಾಸದೇವರ ಪ್ರೀತಿಗಾಗಿ ಅವರನ್ನು ತಿಳಿಯುತ್ತೇವೆ. ಮತ್ತು ಅಪರಿಮಿತ ಸುಖವುಳ್ಳ ಅವರ ಪ್ರೀತಿಗಾಗಿ ಅವರನ್ನು ಧ್ಯಾನಿಸುತ್ತೇವೆ. ಆದ್ದರಿಂದ ಅವರು ನಮ್ಮನ್ನು ಸತ್ಕರ್ಮಾನುಷ್ಠಾನದಲ್ಲಿ ಪ್ರೇರಿಸಲಿ.

**೨೫. ಏಕಾಕ್ಷರ ವೇದವ್ಯಾಸಮಂತ್ರ**

**॥ ಓಂ ವ್ಯಾಂ ಓಂ ॥**

ಸರ್ವ ಅಜ್ಞಾನನಾಶಕರಾದ ಸರ್ವಜ್ಞರಾದ ವೇದವ್ಯಾಸದೇವರಿಗೆ ನಮಃ.

ವೇದಗಳ ವಿಭಾಗಕ್ಕೆ ವೇದಾಭಿವ್ಯಕ್ತಿಯು ಆವಶ್ಯಕವಾಗಿರುವುದರಿಂದ ವೇದಾಭಿ-ವ್ಯಂಜಕರಾದ "ಹಯಗ್ರೀವ"ದೇವರ ಮಂತ್ರವನ್ನು ಹೇಳುತ್ತಾರೆ.

**೨೬. ಅಷ್ಟಾಕ್ಷರ ಹಯಗ್ರೀವಮಂತ್ರ**

**॥ ಓಂ ಹಾಂ ಹಯಗ್ರೀವಾಯ ನಮ ಓಂ ॥**

ಅಜ್ಞಾನವನ್ನು ಕಳೆಯುವ ತತ್ತ್ವಗಳನ್ನು ತಿಳಿಸುವ ಹಯಗ್ರೀವ ದೇವರಿಗೆ ನಮಃ ।

**೨೭. ಅಷ್ಟಾಕ್ಷರ ಕಪಿಲಮಂತ್ರ**

**॥ ಓಂ ಓಂ ಕಂ ಕಪಿಲಾಯ ನಮ ಓಂ ॥**

ಗುಣಪೂರ್ಣನಾದ, ಸುಖರೂಪನಾದ ೧.ಕೇವಲ ಸುಖವನ್ನು ಅನುಭವಿಸುವ ಮುಕ್ತರನ್ನು ಭಕ್ತರನ್ನಾಗಿ ಸ್ವೀಕರಿಸುವವನು ೨.ಭಕ್ತರನ್ನು ನಡುಗಿಸುವ (ಕಂಪಿಸುವ) ಕಾಮಾದಿಗಳನ್ನು ತನ್ನ ಉಪದೇಶದ ಮೂಲಕ ಪರಿವರ್ತನಗೊಳಿಸುವವನು ಆದುದರಿಂದ ಕಪಿಲ ಎಂಬ ಶಬ್ದದಿಂದ ವಾಚ್ಯನಾದ ವಿಷ್ಣುವಿಗೆ ನಮಃ

ಹೀಗೆಯೇ ಜ್ಞಾನಾವತಾರಿಯಾದ ದತ್ತಾತ್ರೇಯರೂಪಿ ವಿಷ್ಣುವಿನ ಮಂತ್ರವನ್ನು ಹೇಳುತ್ತಾರೆ.

## ೨೮. ನವಾಕ್ಷರ ದತ್ತಾತ್ರೇಯಮಂತ್ರ

**॥ ಓಂ ಓಂ ದಂ ದತ್ತಾತ್ರೇಯಾಯ ನಮಃ ಓಂ ॥**

ಗುಣಪೂರ್ಣನಾದ, ಭಕ್ತಾಭೀಷ್ಟಪ್ರದನಾದ, ಭಕ್ತರ ಅನಿಷ್ಟನಿವರ್ತಕನಾದ ನನ್ನನ್ನು ನಿನಗೆ ಪುತ್ರನನ್ನಾಗಿ ಕೊಟ್ಟಿದ್ದೇನೆಂದು ಅತ್ರಿ ಮಹರ್ಷಿಗಳಿಗೆ ವರವನ್ನು ಕೊಟ್ಟು ಅವರಲ್ಲಿ ಅವತರಿಸಿರುವದರಿಂದ ದತ್ತಾತ್ರೇಯ ಎಂಬ ಶಬ್ದದಿಂದ ವಾಚ್ಯನಾದ ವಿಷ್ಣುವಿಗೆ ನಮಃ

ಇಲ್ಲಿಯವರೆಗೆ ತಂತ್ರಸಾರೋಕ್ತ ವಿಷ್ಣುಮಂತ್ರಗಳ ವ್ಯಾಖ್ಯಾನವು ಮುಗಿಯಿತು.



## ವೇದೋಕ್ತ ಮಂತ್ರ

### ೨೯. ವಿಷ್ಣುಸೂಕ್ತಮಂತ್ರ

ಓಂ ವಿಷ್ಣೋರ್ನು ಕಂ ವೀರ್ಯಾಣಿ ಪ್ರ ವೋಚಂ ಯಃ
ಪಾರ್ಥಿವಾನಿ ವಿಮಮೇ ರಜಾಂಸಿ । ಯೋ ಅಸ್ಕಭಾಯದುತ್ತರಂ
ಸಧಸ್ಥಂ ವಿಚಕ್ರಮಾಣಸ್ತ್ರೇಧೋರುಗಾಯಃ ಓಂ ॥೧॥

ಬ್ರಹ್ಮದೇವರು ಭಗವಂತನ ಗುಣಗಳನ್ನು (ಜಪಕಾಲದಲ್ಲಿ) ಸ್ಮರಿಸುವ ಸಂದರ್ಭದಲ್ಲಿ ಗಣನೆಗಾಗಿ ಮಣಿಗಳ ಸ್ಥಾನದಲ್ಲಿ ಪಾರ್ಥಿವ ಕಣಗಳನ್ನು ಸ್ವೀಕರಿಸಿದರು. ಭಗವದನುಗ್ರಹಪ್ರಾಪ್ತಸಾಮರ್ಥ್ಯದಿಂದ ಊರ್ಧ್ವಲೋಕವನ್ನು ಸ್ತಂಭನಮಾಡಿದರು. ಭಗವತ್ಪ್ರೀತಿಗಾಗಿ ಕರ್ಮಗಳನ್ನು ಮಾಡುವರು. ಮತ್ತು ಭಗವಂತನನ್ನು ಚನ್ನಾಗಿ ತಿಳಿದವರು. ಪ್ರಾತರ್ಮಾಧ್ಯಂದಿನ ಸಾಯಂ ಸವನಗಳಿಂದ ಚೆನ್ನಾಗಿ ಗಾನಮಾಡುವರು. ಆದ್ದರಿಂದ ಅಂತಹ ಬ್ರಹ್ಮದೇವರನ್ನು ಕುರಿತು ಸರ್ವವ್ಯಾಪಕನಾದ ನನ್ನ ಮಹಿಮೆಗಳನ್ನು ನಾನು ಹೇಳಿದೆನು. ॥೧॥

ಓಂ ಪ್ರ ತದ್ ವಿಷ್ಣುಃ ಸ್ತವತೇ ವೀರ್ಯೇಣ ಮೃಗೋ ನ ಭೀಮಃ
ಕುಚರೋ ಗಿರಿಷ್ಠಾಃ । ಯಸ್ಯೋರುಷು ತ್ರಿಷು ವಿಕ್ರಮಣೇಷ್ವಧಿ
ಕ್ಷಿಯಂತಿ ಭುವನಾನಿ ವಿಶ್ವಾ ಓಂ ॥೨॥

ವಿಷ್ಣುವು ಸಿಂಹದಂತೆ ದೈತ್ಯರಿಗೆ ಭಯಂಕರನು. ದುಷ್ಟರಿಗೆ ಸೂರ್ಯನಂತೆ ದಾಹಕನು. ಲಯಕಾಲದಲ್ಲಿ ಪೃಥಿವೀ ತದುಪಲಕ್ಷಿತಸರ್ವವನ್ನೂ ಭಕ್ಷಣಮಾಡುವವನು. ಮೇರುಪರ್ವತದಲ್ಲಿ ಇರುವವನು. ಅವನ ಉತ್ಕೃಷ್ಟವಾದ ಮೂರು ಪದವಿನ್ಯಾಸಗಳಲ್ಲಿ ಸರ್ವಲೋಕಗಳು ಸೇರಿಕೊಂಡಿವೆ. ಅಂತಹ ಈ ವಿಷ್ಣುವು ತನ್ನ ಸಾಮರ್ಥ್ಯದಿಂದ ಬ್ರಹ್ಮಾಂಡವನ್ನು ತನ್ನ ಭಾರವನ್ನು ಸಹಿಸುವ ಶಕ್ತಿಯುಳ್ಳದ್ದನ್ನಾಗಿ ಮಾಡಿದ್ದಾನೆ. ॥೨॥

ಓಂ ಪ್ರ ವಿಷ್ಣವೇ ಶೂಷಮೇತು ಮನ್ಮ ಗಿರಿಕ್ಷಿತ ಉರುಗಾಯಾಯ
ವೃಷ್ಣೇ । ಯ ಇದಂ ದೀರ್ಘಂ ಪ್ರಯತಂ ಸಧಸ್ಥಮೇಕೋ
ವಿಮಮೇ ತ್ರಿಭಿರಿತ್ ಪದೇಭಿಃ ಓಂ ॥೩॥

ವಿಷ್ಣು ಒಬ್ಬನೇ ವಿಶಾಲವಾದ ಉದ್ದಾದ ಈ ಬ್ರಹ್ಮಾಂಡವನ್ನು ಮೂರೇ ಪಾದಗಳಿಂದ ಗಣನೆ ಮಾಡಿದನು. (ವ್ಯಾಪಿಸಿದನು) ಮೇರುಪರ್ವತದಲ್ಲಿರುವ ಉತ್ಕೃಷ್ಟತ್ವೇನ ಗಾನ

ವಿಷಯನಾದ ಭಕ್ತರ ಅಭೀಷ್ಟಗಳನ್ನು ಪೂರೈಸುವ ಆ ವಿಷ್ಣುವಿಗೆ ಮನನೀಯವಾದ ಸ್ವಾಭಾವಿಕವಾದ ಬಲವು ಇರುತ್ತದೆ. ॥೩॥

ಓಂ ಯಸ್ಯ ತ್ರೀ ಪೂರ್ಣಾ ಮಧುನಾ ಪದಾನ್ಯಕ್ಷೀಯಮಾಣಾ
ಸ್ವಧಯಾ ಮದಂತಿ । ಯ ಉ ತ್ರಿಧಾತು ಪೃಥಿವೀಮುತ
ದ್ಯಾಮೇಕೋ ದಾಧಾರ ಭುವನಾನಿ ವಿಶ್ವಾ ಓಂ ॥೪॥

ವಿಷ್ಣುವಿನ ಮೂರು ಪಾದಗಳು ಸುಖಪೂರ್ಣವಾದವುಗಳು. ಆ ಪಾದಗಳು ಸುಖದಿಂದ ಕ್ಷೀಣವಾಗದೇ ಯಾವಾಗಲೂ ಹರ್ಷ ಭರಿತವಾಗಿರುತ್ತವೆ. ವಿಷ್ಣು ಒಬ್ಬನೇ ಪ್ರಕೃತಿಪುರುಷಕಾಲಧಾರಕನು. ಅವನು ಪೃಥಿವೀಯನ್ನು ದ್ಯುಲೋಕವನ್ನು ಎಲ್ಲ ಲೋಕಗಳನ್ನು ಧಾರಣಮಾಡಿದ್ದಾನೆ. ॥೪॥

ಓಂ ತದಸ್ಯ ಪ್ರಿಯಮಭಿ ಪಾಥೋ ಅಶ್ಯಾಂ ನರೋ ಯತ್ರ
ದೇವಯವೋ ಮದಂತಿ । ಉರುಕ್ರಮಸ್ಯ ಸ ಹಿ ಬಂಧುರಿತ್ಥಾ
ವಿಷ್ಣೋಃ ಪದೇ ಪರಮೇ ಮಧ್ವ ಉತ್ಸಃ ಓಂ ॥೫॥

ದೇವತ್ವವನ್ನು ಹೊಂದಲು ಬಯಸುವ ಮನುಷ್ಯರು ಯಾವ ಭಗವಂತನ ಪಾದೋದಕಸೇವನವಿಷಯದಲ್ಲಿ ಹರ್ಷಪಡುವರೋ, ಆ ಪಾದೋದಕಸೇವನ (ಪ್ರಾಶನ) ಮಾಡಿದವರು ಪರಮಾತ್ಮನಿಗೆ ಪ್ರಿಯರಾಗುತ್ತಾರೆ. ಆನಂದತೀರ್ಥಭಗವತ್ಪಾದಾಚಾರ್ಯರು ಅಭಿಷೇಕಾದಿಗಳನ್ನು ಮಾಡಿ ತೀರ್ಥಪಾನಮಾಡಿ ಪರಮಾತ್ಮನಿಗೆ ಪರಮಪ್ರಿಯರಾಗಿದ್ದಾರೆ. ಅಂತಹ ತ್ರಿವಿಕ್ರಮರೂಪಿಯಾದ ಭಗವಂತನ ಪಾದಕಮಲದಲ್ಲಿ ಬ್ರಹ್ಮದೇವರಿಂದ ಅಭಿಷಿಕ್ತವಾದ ಗಂಗಾಜಲವನ್ನು ಮತ್ತು ಭಗವಂತನ ಪರಿಪೂರ್ಣಸನ್ನಿಧಾನವುಳ್ಳ ಶಾಲಿಗ್ರಾಮಾದಿಗಳಲ್ಲಿ ಅಭಿಷಿಕ್ತವಾದ ಜಲವನ್ನು ನಾನು ಪಾನಮಾಡುತ್ತೇನೆ. ॥೫॥

ಓಂ ತಾ ವಾಂ ವಾಸ್ತೂನ್ಯುಶ್ಮಸಿ ಗಮಧ್ಯೈ ಯತ್ರ ಗಾವೋ
ಭೂರಿಶೃಂಗಾ ಅಯಾಸಃ । ಅತ್ರಾಹ ತದುರುಗಾಯಸ್ಯ ವೃಷ್ಣಃ
ಪರಮಂ ಪದಮವ ಭಾತಿ ಭೂರಿ ಓಂ ॥೬॥

ಬ್ರಹ್ಮರುದ್ರಾದಿಲೋಕಪಾಲರ ವಾಸಕ್ಕೆ ಯೋಗ್ಯವಾದ ಆ ಭಗವಂತನ ಪಾದಗಳನ್ನು ಸೇರಿದ ಸಾಧಕೋತ್ತಮರಾದ ಮುಕ್ತರು ಪುನಃ ಸಂಸಾರಕ್ಕೆ ಬರುವುದಿಲ್ಲ. ಆದ್ದರಿಂದ ಆ ಭಗವಂತನ ಪಾದಗಳನ್ನು ಸೇರಲು ನಾವು ಬಯಸುತ್ತೇವೆ. ಆ ಭಗವಂತನ ಪಾದಗಳು

ಅಪ್ರಸಿದ್ಧವೆಂದು ತಿಳಿಯುವುದು ಅತ್ಯಾಶ್ಚರ್ಯ ಸಂಗತಿ. ಈ ಲೋಕದಲ್ಲೇ ಗಯಾದಲ್ಲಿ ಉತ್ತಮನೆಂದು ಸುತ್ಯನಾದ ಭಕ್ತಾಭೀಷ್ಟಪ್ರದನಾದ ಭಗವಂತನ ಶ್ರೇಷ್ಠವಾದ ಧ್ವಜವಜ್ರಾದಿಗಳಿಂದ ಚಿಹ್ನಿತವಾದ ಪಾದವು ಪ್ರತ್ಯಕ್ಷವಾಗಿದೆ.

ವಿಶೇಷ :- ಗಯಾಕ್ಷೇತ್ರದಲ್ಲಿರುವ ಪಾದವನ್ನು ದೃಷ್ಟಾಂತವನ್ನಾಗಿ ಇಟ್ಟು ಕೊಂಡು ಉಳಿದ ಎರಡು ಪಾದಗಳು "ಪದದ್ವಯಂ ಸತ್ ವೇದೋಕ್ತತ್ವಾತ್ ಗಯಾಶಿರಸ್ಥ ಪದವತ್" ಎಂಬ ಯುಕ್ತಿಯಿಂದ ಹಾಗೂ 'ತ್ರೀಣಿ ಪದಾ ವಿಚಕ್ರಮೇ' ಎಂಬ ವೇದವಾಕ್ಯದಿಂದ ಸಿದ್ಧವಾಗಿದ್ದರೂ ಅವುಗಳನ್ನು ಒಪ್ಪದಿರುವವನಿಗೆ ಏನು ಹೇಳುವುದು? ಒಪ್ಪದಿರುವುದು ಅತ್ಯಾಶ್ಚರ್ಯ ಎಂದು ಶ್ರುತಿಯೇ ಸ್ವಯಂ ಆಶ್ಚರ್ಯಾರ್ಥದಲ್ಲಿ "ಅಹ" ಎಂಬ ಪದಪ್ರಯೋಗ ಮಾಡುವ ಮೂಲಕ ಸೂಚಿಸಿದೆ. ॥೬॥

ಇಲ್ಲಿಗೆ ಷಡೃಚವಿಷ್ಣುಸೂಕ್ತಮಂತ್ರವ್ಯಾಖ್ಯಾನವು ಮುಗಿಯಿತು.

## ೩೦ ಪಂಚದಶರ್ಚ ಇಂದ್ರನಾಮಕವಿಷ್ಣುಸೂಕ್ತಮಂತ್ರ

ಇಂದ್ರನಾಮಕ ಪರಮಾತ್ಮನನ್ನು ಕೊಂಡಾಡುವ ಹದಿನೈದು ಋಕ್‌ಗಳಿಂದ ಸಹಿತವಾದ ಸೂಕ್ತದಲ್ಲಿ ಪ್ರಥಮಮಂತ್ರವಿದು.

> ಓಂ ಯೋ ಜಾತ ಏವ ಪ್ರಥಮೋ ಮನಸ್ವಾನ್ ದೇವೋ
> ದೇವಾನ್ ಕ್ರತುನಾ ಪರ್ಯಭೂಷತ್ । ಯಸ್ಯ ಶುಷ್ಮಾದ್
> ರೋದಸೀ ಅಭ್ಯಸೇತಾಂ ನೃಮ್ಣಸ್ಯ ಮಹ್ನಾ ಸ ಜನಾಸ ಇಂದ್ರಃ ಓಂ ॥

ವಿಷ್ಣುವು ಕೇವಲ ಪ್ರಾದುರ್ಭವಿಸುತ್ತಾನೆ ಹೊರತು ನಮ್ಮಂತೆ ಪ್ರಾಕೃತದೇಹವುಳ್ಳ-ವನು ಅಲ್ಲ. ಅವನು ಮುಖ್ಯನೂ ಜ್ಞಾನಿಯೂ ಸರ್ಜನಾದಿಕ್ರೀಡಾವಿಶಿಷ್ಟನು. ತನ್ನ ಆಜ್ಞೆಯಂತೆ ಸ್ವಸ್ವಕಾರ್ಯದಲ್ಲಿ ಪ್ರವೃತ್ತರಾದುದರಿಂದ ದೇವತೆಗಳನ್ನು ರಕ್ಷಿಸುತ್ತಾ ಶೋಭಿಸುವಂತೆ ಮಾಡಿದನು. ಇಂದ್ರನಾಮಕ ವಿಷ್ಣುವಿನ ಬಲದಿಂದ ದ್ಯುಲೋಕ ಹಾಗೂ ಪೃಥಿವೀಲೋಕಗಳು ಪರಿಮಾಣದಿಂದ ತಿರಸ್ಕೃತವಾಗಿವೆ. (ವಿಷ್ಣುವು ದ್ಯುಲೋಕ- ಪೃಥಿವೀಲೋಕಗಳಿಗಿಂತಲೂ ಅಪರಿಮಿತವ್ಯಾಪ್ತಿಯುಳ್ಳವನು) ಸುಖದ ಮಹಿಮೆಯಿಂದ ಸರ್ವರಿಗಿಂತಲೂ ಶ್ರೇಷ್ಠನಾಗಿದ್ದಾನೆ.॥೧॥

> ಓಂ ಯಃ ಪೃಥಿವೀಂ ವ್ಯಥಮಾನಾಮದೃಂಹದ್ ಯಃ ಪರ್ವತಾನ್
> ಪ್ರಕುಪಿತಾँ ಅರಮ್ಣಾತ್ । ಯೋ ಅಂತರಿಕ್ಷಂ ವಿಮಮೇ
> ವರೀಯೋ ಯೋ ದ್ಯಾಮಸ್ತಭ್ನಾತ್ ಸ ಜನಾಸ ಇಂದ್ರಃ ಓಂ ॥೨॥

ಇಂದ್ರಾಂತರ್ಯಾಮಿ ಇಂದ್ರನಾಮಕ ಶ್ರೀಹರಿಯು ದೈತ್ಯರನ್ನು ಸಂಹರಿಸಿ, ದೈತ್ಯರಿಂದ ಪೀಡಿತಳಾದ ಭೂದೇವಿಯನ್ನು ಸುಖವುಳ್ಳವಳನ್ನಾಗಿ ಮಾಡಿದನು. ಲೋಕನಾಶಕಗಳಾದ ಪರ್ವತಗಳ ರೆಕ್ಕೆಗಳನ್ನು ಕತ್ತರಿಸಿದನು. ಅಂತರಿಕ್ಷವನ್ನು ವಿಸ್ತಾರಗೊಳಿಸಿದನು. ದ್ಯುಲೋಕವನ್ನು ಸ್ತಂಭನ ಮಾಡಿದನು. ಆ ಇಂದ್ರನಾಮಕ ವಿಷ್ಣುವೇ ಸರ್ವಶ್ರೇಷ್ಠನು. ॥೨॥

ಓಂ ಯೋ ಹತ್ವಾಹಿಮರಿಣಾತ್ ಸಪ್ತ ಸಿಂಧೂನ್ ಯೋ ಗಾ
ಉದಾಜದಪಧಾ ವಲಸ್ಯ । ಯೋ ಅಶ್ಮನೋರಂತರಗ್ನಿಂ ಜಜಾನ
ಸಂವೃಕ್ ಸಮತ್ಸು ಸ ಜನಾಸ ಇಂದ್ರಃ ಓಂ ॥೩॥

ವಿಷ್ಣುವು ನದಿಗಳ ಪ್ರವಾಹವನ್ನು ತಡೆದ 'ಅಹಿ' ಎಂಬ ಅಸುರನನ್ನು ಸಂಹರಿಸಿ ಪ್ರಸಿದ್ಧವಾದ ಸಪ್ತನದಿಗಳನ್ನು ಸಮುದ್ರಕ್ಕೆ ಸೇರುವಂತೆ ಮಾಡಿದನು. ಇಂದ್ರಾಂತರ್ಯಾಮಿಯಾಗಿ ಬಲ ಎಂಬ ಅಸುರನು ಗುಹೆಯಲ್ಲಿ ಮುಚ್ಚಿಟ್ಟ ಗೋವುಗಳನ್ನು ಹೊರಗೆ ಹೋಗುವಂತೆ ಮಾಡಿದನು. ಗುರುಶಿಷ್ಯರೆಂಬ ಅರಣಿಯಂತಿರುವ ಎರಡು ಕಲ್ಲುಗಳ ಮಧ್ಯದಲ್ಲಿ ಜ್ಞಾನವೆಂಬ ಅಗ್ನಿಯನ್ನು ಪ್ರಜ್ವಲನಗೊಳಿಸುವನು. ಯುದ್ಧಗಳಲ್ಲಿ ಭಕ್ತರ ಪಕ್ಷವನ್ನು ಅವಲಂಬಿಸುವನು ಆ ವಿಷ್ಣುವೇ ಸರ್ವಶ್ರೇಷ್ಠನು. ॥೩॥

ಓಂ ಯೇನೇಮಾ ವಿಶ್ವಾ ಚ್ಯವನಾ ಕೃತಾನಿ ಯೋ ದಾಸಂ
ವರ್ಣಮಧರಂ ಗುಹಾಕಃ । ಶ್ವಘ್ನೀವ ಯೋ ಜಿಗೀವಾಁ
ಲಕ್ಷಮಾದದರ್ಯಃ ಪುಷ್ಟಾನಿ ಸ ಜನಾಸ ಇಂದ್ರಃ ಓಂ ॥೪॥

ವಿಷ್ಣುವು ಸರ್ವಪ್ರಾಣಿಗಳನ್ನು (ಜೀವರಾಶಿಗಳನ್ನು)ತಮ್ಮ ತಮ್ಮ ವ್ಯಾಪಾರದಲ್ಲಿ ಪ್ರವೃತ್ತರಾಗಲು ಪ್ರೇರೇಪಿಸುವನು. ಮತ್ತು ಲೋಕಕಂಟಕರಾದ ಜಾತಿಯಿಂದ ಅಧಮರಾದ ಅಸುರರನ್ನು ತಮಸ್ಸಿನಲ್ಲಿ ಹಾಕುವನು. ಗಣಿಯಂತೆ, ಬಹಳ ಧನವುಳ್ಳವನು. ಮತ್ತು ಧನಗಳನ್ನು ಕೊಡುವನು. ಅವನೇ ಸರ್ವಶ್ರೇಷ್ಠನು. ॥೪॥

ಓಂ ಯಂ ಸ್ಮಾ ಪೃಚ್ಛಂತಿ ಕುಹ ಸೇತಿ ಘೋರಮುತೇಮಾಹು-
ರ್ನೈಷೋ ಅಸ್ತೀತ್ಯೇನಮ್ । ಸೋ ಅರ್ಯಃ ಪುಷ್ಟೀರ್ವಿಜ ಇವಾ
ಮಿನಾತಿ ಶ್ರದಸ್ಮೈ ಧತ್ತ ಸ ಜನಾಸ ಇಂದ್ರಃ ಓಂ ॥೫॥

ವಿಷ್ಣುವಿನ ವಿಷಯದಲ್ಲಿ ಪಾದರಸಿಕರಾದ ಜನರು ಅವನು ಎಲ್ಲಿ ಇರುತ್ತಾನೆ ?

ಎಂದು ಕೇಳುತ್ತಾರೆ. ಕೆಲವರು ಅವನನ್ನು ಉಗ್ರನೆಂದು ಹೇಳುತ್ತಾರೆ. ಕೆಲವರು ಸೌಮ್ಯನೆಂದು ಹೇಳುತ್ತಾರೆ. ಕೆಲವರು ಇರುತ್ತಾನೆ ಎಂದು ಹೇಳುತ್ತಾರೆ. ಕೆಲವರು ಇಲ್ಲವೆಂದು ಹೇಳುತ್ತಾರೆ. ಹೀಗೆ ನಾನಾ ಜನರ ನಾನಾತರಹದ ಊಹೆಗಳಿಗೆ ವಿಷಯನಾದ ಆ ವಿಷ್ಣುವು ಪಕ್ಷಿಯ ಮರಿಯಂತೆ ದಿನೇ ದಿನೇ ಜೀವರ ಹೃದಯದಲ್ಲಿ ಅಭಿವೃದ್ಧನಾಗಿ ಇರುತ್ತಾನೆ. ಈ ರೀತಿಯಾಗಿರುವ ಇಂದ್ರಶಬ್ದವಾಚ್ಯನಾದ ಆ ವಿಷ್ಣುವು ತನ್ನನ್ನು ಅರಿತ ಭಕ್ತನಿಗೆ ಬಲವನ್ನು ಕೊಡುತ್ತಾನೆ ಅವನೇ ಸರ್ವಶ್ರೇಷ್ಠನು. ॥೫॥

ಓಂ ಯೋ ರಧ್ರಸ್ಯ ಚೋದಿತಾ ಯಃ ಕೃಶಸ್ಯ ಯೋ ಬ್ರಹ್ಮಣೋ
ನಾಧಮಾನಸ್ಯ ಕೀರೇಃ । ಯುಕ್ತಗ್ರಾವ್ಣೋ ಯೋಽವಿತಾ ಸುಶಿಪ್ರಃ
ಸುತಸೋಮಸ್ಯ ಸ ಜನಾಸ ಇಂದ್ರಃ ಓಂ ॥೬॥

ಸಮುದ್ರದಂತೆ ಉದ್ರಿಕ್ತರಾದ ಉತ್ತಮಾಧಿಕಾರಿಗಳಿಗೆ ಪ್ರೇರಕನು. ಮಧ್ಯಮಾಧಿಕಾರಿಗಳಿಗೂ ಪ್ರೇರಕನು. ಅವರಿಬ್ಬರೂ ಮಾಡಿದ ಸ್ತೋತ್ರಕ್ಕೆ ಪ್ರೇರಕನು. ಹಾಗು ಫಲಾಪೇಕ್ಷೆಯಿಂದ ಯಾಚಿಸುವ, ಸ್ವಪೂಜಾತ್ವೇನ ಕರ್ಮವನ್ನು ಆಚರಿಸುವ, ಸೋಮಸವನಕ್ಕಾಗಿ ಕಲ್ಲನ್ನು ಕೈಯಲ್ಲಿ ಹಿಡಿದು ಸೋಮಾಭಿಷವಣವನ್ನು ಮಾಡಿದ ಯಜಮಾನನ ಪಾಲಕನು. ಹಾಗೂ ಸುಂದರವಾದ ದೇಹವುಳ್ಳವನು. ಅಂತಹ ವಿಷ್ಣುವೇ ಸರ್ವಶ್ರೇಷ್ಠನು. ॥೬॥

ಓಂ ಯಸ್ಯಾಶ್ವಾಸಃ ಪ್ರದಿಶಿ ಯಸ್ಯ ಗಾವೋ ಯಸ್ಯ ಗ್ರಾಮಾ ಯಸ್ಯ
ವಿಶ್ವೇ ರಥಾಸಃ । ಯಃ ಸೂರ್ಯಂ ಯ ಉಷಸಂ ಜಜಾನ ಯೋ
ಅಪಾಂ ನೇತಾ ಸ ಜನಾಸ ಇಂದ್ರಃ ಓಂ ॥೭॥

ಪ್ರತಿದಿಕ್ಕುಗಳಲ್ಲಿಯೂ ಗಮನಶೀಲವಾದ ಕುದುರೆಗಳು ಗೋವುಗಳು ಗ್ರಾಮಗಳು ಎಲ್ಲ ರಥಗಳು ಹಾಗೂ ಜೀವರ ಸುಖವಿಶೇಷಗಳು ಆ ವಿಷ್ಣುವಿನ ಅಧೀನವಾಗಿವೆ. ಅವನು ಸೂರ್ಯನ ಹಾಗೂ ತತ್ಪುತ್ರಿ ಉಷಾಳ ಉತ್ಪತ್ತಿಗೆ ಕಾರಣನು, ಎಲ್ಲ ನದೀಜಲಗಳ ಹಾಗೂ ಕರ್ಮಗಳ ಮತ್ತು ದೇವತೆಗಳ ಪ್ರೇರಕನು. ಆ ವಿಷ್ಣುವೇ ಸರ್ವಶ್ರೇಷ್ಠನು. ॥೭॥

ಓಂ ಯಂ ಕ್ರಂದಸೀ ಸಂಯತೀ ವಿಹ್ವಯೇತೇ ಪರೇಽವರ
ಉಭಯಾ ಅಮಿತ್ರಾಃ । ಸಮಾನಂ ಚಿದ್ ರಥಮಾತಸ್ಥಿವಾಂಸಾ
ನಾನಾ ಹವೇತೇ ಸ ಜನಾಸ ಇಂದ್ರಃ ಓಂ ॥೮॥

ದೊಡ್ಡ ದೊಡ್ಡ ಕಲಿಮೊದಲಾದ ಶತ್ರುಗಳು ಸಾಮಾನ್ಯರಾದ ಶತ್ರುಗಳು ಇವರಿಬ್ಬರೂ ಆ ವಿಷ್ಣುವನ್ನು ಕುರಿತು ಆಕ್ರಂದನ ಮಾಡುವರು. ಯುದ್ಧದಲ್ಲಿ ಭರ್ತ್ಸನ ಮಾಡುತ್ತಾ ಕರೆಯುವರು. ಜ್ಞಾನವನ್ನು ಹೊಂದಿದ ಉತ್ತಮ ಹಾಗೂ ಮಧ್ಯಮಾಧಿಕಾರಿಗಳು ಅವನನ್ನು ನಾನಾರೀತಿಯಿಂದ ಗೌರವಪೂರ್ವಕವಾಗಿ ಆಹ್ವಾನಿಸುವರು. ಆ ವಿಷ್ಣುವೇ ಸರ್ವಶ್ರೇಷ್ಠನು.॥೮॥

ಓಂ ಯಸ್ಮಾನ್ನ ಋತೇ ವಿಜಯಂತೇ ಜನಾಸೋ ಯಂ
ಯುಧ್ಯಮಾನಾ ಅವಸೇ ಹವಂತೇ । ಯೋ ವಿಶ್ವಸ್ಯ ಪ್ರತಿಮಾನಂ
ಬಭೂವ ಯೋ ಅಚ್ಯುತಚ್ಯುತ್ ಸ ಜನಾಸ ಇಂದ್ರಃ ಓಂ ॥೯॥

ವಿಷ್ಣುವಿನ ಅನುಗ್ರಹವಿಲ್ಲದೇ ಜನರು ವಿಜಯಶಾಲಿಗಳಾಗುವುದಿಲ್ಲ. ಯುದ್ಧ-ಮಾಡುವ ಜನರು ತಮ್ಮ ರಕ್ಷಣೆಗಾಗಿ ಅವನನ್ನು ಹೋಮಿಸುತ್ತಾರೆ. ಗೌರವದಿಂದ ಆಹ್ವಾನಿಸುತ್ತಾರೆ ಅವನು ಸರ್ವಜೀವರಿಗೆ ಬಿಂಬನು. ಅವನು ವರಾದಿಗಳಿಂದ ಅವಧ್ಯರಾದವರನ್ನು ಸಂಹರಿಸುವನು. ಆ ವಿಷ್ಣುವೇ ಸರ್ವಶ್ರೇಷ್ಠನು. ॥೯॥

ಓಂ ಯಃ ಶಶ್ವತೋ ಮಹ್ಯೇನೋ ದಧಾನಾನಮನ್ಯಮಾನಾಞ್ಛರ್ವಾ
ಜಘಾನ । ಯಃ ಶರ್ಧತೇ ನಾನುದದಾತಿ ಶೃಧ್ಯಾಂ ಯೋ
ದಸ್ಯೋರ್ಹಂತಾ ಸ ಜನಾಸ ಇಂದ್ರಃ ಓಂ ॥೧೦॥

ಅವನು ಅನಾದಿಕಾಲದಿಂದ ಇದ್ದವನಾಗಿ ಮಹಾಪಾಪಿಗಳಾದ ತಮೋಯೋಗ್ಯರಾದ ತತ್ವಜ್ಞಾನರಹಿತರಾದ ಸರ್ವರನ್ನು ಸಂಹರಿಸಿದನು. ಬಲಿಷ್ಠನಾದ ತನಗೆ ಸ್ಪೃಹಣೀಯ-ವಾದ ಚರುಪುರೋಡಾಶಾದಿಗಳನ್ನು ಸಮರ್ಪಿಸದವರನ್ನು ಅವನು ನಾಶಮಾಡುವನು. ಚೋರರನ್ನು ಸಂಹರಿಸುವ ಆ ಭಗವಂತನೇ ಸರ್ವಶ್ರೇಷ್ಠನು. ॥೧೦॥

ಓಂ ಯಃ ಶಂಬರಂ ಪರ್ವತೇಷು ಕ್ಷಿಯಂತಂ ಚತ್ವಾರಿಂಶ್ಯಾಂ
ಶರದ್ಯನ್ವವಿಂದತ್ । ಓಜಾಯಮಾನಂ ಯೋ ಅಹಿಂ ಜಘಾನ
ದಾನುಂ ಶಯಾನಂ ಸ ಜನಾಸ ಇಂದ್ರಃ ಓಂ ॥೧೧॥

ಇಂದ್ರಾಂತರ್ಯಾಮಿಯಾಗಿ ಅವನು ೪೦ ವರ್ಷ ಪರ್ವತದಲ್ಲಿ ವಾಸಿಸುತ್ತಿದ್ದ ಶಂಬರಾಸುರನನ್ನು ಹುಡುಕಿ ಸಂಹರಿಸಿದನು. ಮತ್ತು ಮಹಾಪರಾಕ್ರಮಿಯಾದ ನದೀಮಾರ್ಗವನ್ನು ತಡೆದು ಪರ್ವದಲ್ಲಿ ಮಲಗಿದ್ದ ದನುಪುತ್ರನಾದ ''ಅಹಿ'' ಎಂಬುವವನನ್ನು ಸಂಹರಿಸಿದನು. ಆ ವಿಷ್ಣುವೇ ಸರ್ವಶ್ರೇಷ್ಠನು. ॥೧೧॥

ಓಂ ಯಃ ಸಪ್ತರಶ್ಮಿರ್ವೃಷಭಸ್ತುವಿಷ್ಮಾನವಾಸೃಜತ್ ಸರ್ತವೇ ಸಪ್ತ ಸಿಂಧೂನ್ । ಯೋ ರೌಹಿಣಮಸ್ಫುರದ್ ವಜ್ರಬಾಹು- ರ್ದ್ಯಾಮಾರೋಹಂತಂ ಸ ಜನಾಸ ಇಂದ್ರಃ ಓಂ ॥೧೨॥

ಇಂದ್ರಾಂತರ್ಯಾಮಿಯಾದ ವಿಷ್ಣುವು ವಿಲಕ್ಷಣಕಾಂತಿಯುಳ್ಳವನು. ಶ್ರೇಷ್ಠನು. ಬಲಿಷ್ಠನು. ನದೀಪ್ರವಾಹವನ್ನು ತಡೆದ ದೈತ್ಯರನ್ನು ಸಂಹರಿಸಿ ನದಿಗಳನ್ನು ಸಮುದ್ರಕ್ಕೆ ಸೇರುವಂತೆ ಮಾಡಿದನು. ವಜ್ರವನ್ನು ಕೈಯಲ್ಲಿ ಧರಿಸಿ ಸ್ವರ್ಗವನ್ನು ಆರೋಹಣಮಾಡುತ್ತಿದ್ದ 'ರೌಹಿ' ನಾಮಕ ಅಸುರನನ್ನು ಕೆಳಗೆ ಬೀಳಿಸಿದನು. ಆ ವಿಷ್ಣುವೇ ಸರ್ವಶ್ರೇಷ್ಠನು. ॥೧೨॥

ಓಂ ದ್ಯಾವಾ ಚಿದಸ್ಮೈ ಪೃಥಿವೀ ನಮೇತೇ ಶುಷ್ಮಾಚ್ಚಿದಸ್ಯ ಪರ್ವತಾ ಭಯಂತೇ । ಯಃ ಸೋಮಪಾ ನಿಚಿತೋ ವಜ್ರಬಾಹುರ್ಯೋ ವಜ್ರಹಸ್ತಃ ಸ ಜನಾಸ ಇಂದ್ರಃ ಓಂ ॥೧೩॥

ಅವನೆದುರಿಗೆ ದ್ಯುಲೋಕ ಹಾಗೂ ಪೃಥಿವಿಯ ಅಭಿಮಾನಿದೇವತೆಗಳು ವಿನಮ್ರತೆಯನ್ನು ತೋರಿಸುತ್ತಾರೆ. ಅವನ ಬಲದಿಂದ ಪರ್ವತಾಭಿಮಾನಿದೇವತೆಗಳು ಹೆದರುತ್ತಾರೆ. ಅವನು ಯಜ್ಞದಲ್ಲಿ ಸೋಮಪಾನಮಾಡುವನು. ಅವನು ವಜ್ರದಂತೆ ಅಭೇದ್ಯವಾದ ಬಾಹುಗಳುಳ್ಳವನು. ಅವನು ಕೈಯಲ್ಲಿ ವಜ್ರಾಯುಯುಧವನ್ನು ಧರಿಸಿರುವನು. ಆ ಇಂದ್ರಾಂತರ್ಯಾಮಿಯಾದ ಇಂದ್ರನಾಮಕ ವಿಷ್ಣುವೇ ಸರ್ವಶ್ರೇಷ್ಠನು. ॥೧೩॥

ಓಂ ಯಃ ಸುನ್ವಂತಮವತಿ ಯಃ ಪಚಂತಂ ಯಃ ಶಂಸಂತಂ ಯಃ ಶಶಮಾನಮೂತೀ । ಯಸ್ಯ ಬ್ರಹ್ಮ ವರ್ಧನಂ ಯಸ್ಯ ಸೋಮೋ ಯಸ್ಯೇದಂ ರಾಧಃ ಸ ಜನಾಸ ಇಂದ್ರಃ ಓಂ ॥೧೪॥

ಅವನು ಸೋಮರಸವನ್ನು ಅಭಿಷವಣ ಮಾಡುವವನನ್ನು, ಚರುಪುರೋಡಾಶಾದಿ ಹವಿರ್ದ್ರವ್ಯಗಳನ್ನು ಪಕ್ವಮಾಡುವವನನ್ನು, ಶಂಸನ ಮಾಡುವವನನ್ನು, ಶಸ್ತ್ರದಿಂದ ಸ್ತೋತ್ರಮಾಡುವವನನ್ನು ರಕ್ಷಿಸುತ್ತಾನೆ. ಭಕ್ತರು ಮಾಡುವ ಸ್ತೋತ್ರಗಳು ಅವನ ಅಭಿವೃದ್ಧಿಗೆ (ಸಂತೋಷಕ್ಕೆ) ಕಾರಣಗಳಾಗಿವೆ. ಅವನಿಗೆ ಸೋಮರಸವು ಪಾನಕ್ಕೆ ಅರ್ಹವಾಗಿದೆ. ಅಣಿಮಾದ್ಯಷ್ಟಸಿದ್ಧಿಗಳು ಅವನ ಅಧೀನವಾಗಿವೆ. ಆ ವಿಷ್ಣುವೇ ಸರ್ವಶ್ರೇಷ್ಠನು. ॥೧೪॥

ಓಂ ಯಃ ಸುನ್ವತೇ ಪಚತೇ ದುಧ್ರ ಆ ಚಿದ್ ವಾಜಂ ದರ್ದರ್ಷಿ ಸ
ಕಿಲಾಸಿ ಸತ್ಯಃ । ವಯಂ ತ ಇಂದ್ರ ವಿಶ್ವಹ ಪ್ರಿಯಾಸಃ
ಸುವೀರಾಸೋ ವಿದಥಮಾ ವದೇಮ ಓಂ ॥೧೫॥

ಹೇ ವಿಷ್ಣುವೇ ! ನೀನು ಸೋಮಾಭಿಷವಣಮಾಡುವವನಿಗೆ ಮತ್ತು ಚರುಪೋರೋಡಾಶಾದಿಗಳನ್ನು ಪಕ್ವಮಾಡುವವನಿಗೆ ಚನ್ನಾಗಿ ಅನ್ನವನ್ನು ಕೊಟ್ಟಿದ್ದಿ. ಶತ್ರುಗಳನ್ನು ನಾಶಮಾಡುತ್ತಿ. ಅಂತಹ ನೀನು ಕಲ್ಯಾಣಗುಣಪೂರ್ಣನು. ಪ್ರೇರಕತ್ವೇನ ವಿಶ್ವಾಂತರ್ಯಾಮಿಯಾದ ಇಂದ್ರನಾಮಕ ವಿಷ್ಣುವೇ ! ನಾವು ನಿನಗೆ ಪ್ರಿಯರಾಗಿದ್ದೇವೆ. ಆದ್ದರಿಂದ ಒಳ್ಳೆಯ ಬಲ ಹಾಗು ಪುತ್ರರುಳ್ಳವರಾಗಿದ್ದೇವೆ. ನಿನ್ನ ಮಹಿಮೆಯನ್ನು ಚೆನ್ನಾಗಿ ಶಿಷ್ಯರಿಗೆ ಹೇಳುತ್ತೇವೆ. ॥೧೫॥

ಇಲ್ಲಿಗೆ ಇಂದ್ರನಾಮಕ ವಿಷ್ಣುಸೂಕ್ತಮಂತ್ರವ್ಯಾಖ್ಯಾನವು ಮುಗಿಯಿತು.

## ೩೧ ಚತುರ್ದಶರ್ಚ ವಿಷ್ಣುಸೂಕ್ತಮಂತ್ರ

ಓಂ ಪರೋ ಮಾತ್ರಯಾ ತನ್ವಾ ವೃಧಾನ ನ ತೇ
ಮಹಿತ್ವಮನ್ವಶ್ನುವಂತಿ । ಉಭೇ ತೇ ವಿದ್ಮ ರಜಸೀ ಪೃಥಿವ್ಯಾ ವಿಷ್ಣೋ
ದೇವ ತ್ವಂ ಪರಮಸ್ಯ ವಿತ್ಸೇ ಓಂ ॥೧॥

ನಿಜಸ್ವರೂಪದಿಂದಲೇ ಪರಿಪೂರ್ಣನಾದ ಹೇ ವಿಷ್ಣುವೇ ನೀನು ಪರಿಮಾಣರಹಿತನಾಗಿದ್ದಿ. ಆದ್ದರಿಂದಲೇ ಯಾವ ದೇವತೆಗಳೂ ನಿನ್ನ ಮಹಿಮೆಯನ್ನು ಪರಿಪೂರ್ಣವಾಗಿ ತಿಳಿದಿಲ್ಲ. ಪೃಥಿವೀ ಹಾಗೂ ತದುಪಲಕ್ಷಿತ ಸರ್ವಕ್ಕೂ ಉತ್ಕೃಷ್ಟನಾದ ನಿನಗೆ ದ್ಯುಲೋಕ ಹಾಗೂ ಭೂಲೋಕಗಳು ಅಧೀನವಾಗಿವೆ. ನೀನು ಸರ್ವರನ್ನು ಜಯಿಸಿರುವಿ. ॥೧॥

ಓಂ ನ ತೇ ವಿಷ್ಣೋ ಜಾಯಮಾನೋ ನ ಜಾತೋ ದೇವ
ಮಹಿಮ್ನಃ ಪರಮಂತಮಾಪ । ಉದಸ್ತಭ್ನಾ ನಾಕಮೃಷ್ವಂ ಬೃಹಂತಂ
ದಾಧರ್ಥ ಪ್ರಾಚೀಂ ಕಕುಭಂ ಪೃಥಿವ್ಯಾಃ ಓಂ ॥೨॥

ಹೇ ವಿಷ್ಣುವೆ ! ಹಿಂದೆ ಜನಿಸಿದವರು ಈಗ ಜನಿಸಿದವರು ಮುಂದೆ ಜನಿಸುವವರು ಯಾರೂ ನಿನ್ನ ಮಹಿಮೆಯ ಅಂತವನ್ನು ಕಂಡು ಕೊಂಡಿಲ್ಲ. ನೀನು ವಿಶಾಲವಾದ ಸ್ವರ್ಗ ಹಾಗೂ ತದುಪಲಕ್ಷಿತ ಮೇಲಿನ ಎಲ್ಲ ಲೋಕಗಳನ್ನು ಸ್ತಂಭನಮಾಡಿದ್ದಿ. ದಿಕ್ಕುಗಳಿಂದ ಸಹಿತವಾಗಿ ಸರ್ವಪೃಥಿವೀಯನ್ನೂ ಧಾರಣಮಾಡಿದ್ದಿ. ॥೨॥

ಓಂ ಇರಾವತೀ ಧೇನುಮತೀ ಹಿ ಭೂತಂ ಸೂಯವಸಿನೀ
ಮನುಷೇ ದಶಸ್ಯಾ । ವ್ಯಸ್ತಭ್ನಾ ರೋದಸೀ ವಿಷ್ಣವೇತೇ ದಾಧರ್ಥ
ಪೃಥಿವೀಮಭಿತೋ ಮಯೂಖೈಃ ಓಂ ॥೩॥

ಹೇ ವಿಷ್ಣುವೇ ! ನೀನು ಐಚ್ಛಿಕ ಸುಖವುಳ್ಳವನು. ಪೋಷಿಸುವ ಗುಣವುಳ್ಳವನು. ತೃಣೋಪಲಕ್ಷಿತ ಸರ್ವಾಭಿಷ್ಟಫಲಪ್ರದನು. ನಿನ್ನ ಮಹಿಮೆಯನ್ನು ಅಥವಾ ನನ್ನ ಕರ್ಮಗಳನ್ನು ಅರಿತವನಾಗಿದ್ದರೆ ನೀನು ನನಗೆ ಅಧಿಕ ಫಲವನ್ನು ಕೊಡು. ಹೇ ವಿಷ್ಣುವೇ ! ಪ್ರಸಿದ್ಧವಾದ ದ್ಯುಲೋಕ ಹಾಗು ಪೃಥಿವೀ ಲೋಕಗಳನ್ನು ಸ್ತಂಭನಮಾಡಿದ್ದಿ. ಪೃಥಿವೀ ಹಾಗೂ ಸರ್ವಭೂತಗಳನ್ನು ಪ್ರಕಾಶಮಾನವಾದ ರಾಮಕೃಷ್ಣಾದ್ಯನೇಕ ಅವತಾರರೂಪಗಳಿಂದ ಪೋಷಣ ಮಾಡಿರುವಿ. ॥೩॥

ಓಂ ಉರುಂ ಯಜ್ಞಾಯ ಚಕ್ರಥುರು ಲೋಕಂ ಜನಯಂತಾ
ಸೂರ್ಯಮುಷಾಸಮಗ್ನಿಮ್ । ದಾಸಸ್ಯ ಚಿದ್ ವೃಷಶಿಪ್ರಸ್ಯ
ಮಾಯಾ ಜಘ್ನಥುರ್ನರಾ ಪೃತನಾಜ್ಯೇಷು ಓಂ ॥೪॥

ಮುಂದಿನ ಮಂತ್ರದಲ್ಲಿರುವ "ಇಂದ್ರಾವಿಷ್ಣೂ" ಎಂಬ ಪದವನ್ನು ಸೇರಿಸಿಕೊಳ್ಳಬೇಕು. ಇಂದ್ರ ವಿಷ್ಣು ಎಂಬ ಎರಡು ರೂಪಗಳುಳ್ಳ ಹೇ ಪರಮಾತ್ಮನೇ ! ಯಜ್ಞಕ್ಕಾಗಿಯೇ ವಿಶಾಲವಾದ ಲೋಕವನ್ನು ನಿರ್ಮಾಣಮಾಡಿದ್ದಿ. ಪ್ರಾತಃ ಇಜ್ಯನಾದ ಸೂರ್ಯದೇವತೆ ಮತ್ತು ತದ್ಯಜನಯೋಗ್ಯವಾದ ಪ್ರಾತಃ ಕಾಲವನ್ನು ಸಾಯಂಕಾಲದಲ್ಲಿ ಇಜ್ಯನಾದ ಅಗ್ನಿದೇವತೆಯನ್ನು ಹಾಗೂ ಸಾಯಂಕಾಲವನ್ನು ಸೃಷ್ಟಿಸಿರುವಿ. ನಿರ್ವಿಕಾರನಾಗಿ ನೀನು ಯುದ್ಧದಲ್ಲಿ ಹಿಂಸಕನಾದ ಇಲಿಯಂತೆ ಸುಖಿಯಾದ ಶಂಬರನಾಮಕ ದೈತ್ಯನ ಮೋಹಕ ವಿದ್ಯೆಗಳನ್ನು ನಾಶಮಾಡಿದ್ದಿ. ॥೪॥

ಓಂ ಇಂದ್ರಾವಿಷ್ಣೂ ದೃಂಹಿತಾಃ ಶಂಬರಸ್ಯ ನವ ಪುರೋ ನವತಿಂ
ಚ ಶ್ನಥಿಷ್ಟಮ್ । ಶತಂ ವರ್ಚಿನಃ ಸಹಸ್ರಂ ಚ ಸಾಕಂ ಹಥೋ
ಅಪ್ರತ್ಯಸುರಸ್ಯ ವೀರಾನ್ ಓಂ ॥೫॥

ಹೇ ಇಂದ್ರ ವಿಷ್ಣು ಎಂಬ ಎರಡು ರೂಪಗಳುಳ್ಳ ಭಗವಂತನೆ ! ಸಮೃದ್ಧವಾದ ಹಾಗೂ ನಾಶ್ಯವಾದ ಶಂಬರಾಸುರನ ೯೯ ಪಟ್ಟಣಗಳನ್ನು ನಾಶಮಾಡಿದ್ದಿ. ಹಾಗು ಶಂಬರಾಸುರನ ಮಹಾಪರಾಕ್ರಮಿಗಳಾದ ೧೧೦೦ ಸೈನಿಕರನ್ನು ಸಂಹರಿಸಿರುವಿ. ॥೫॥

ಓಂ ಇಯಂ ಮನೀಷಾ ಬೃಹತೀ ಬೃಹಂತೋರುಕ್ರಮಾ ತವಸಾ ವರ್ಧಯಂಂತೀ । ರರೇ ವಾಂ ಸ್ತೋಮಂ ವಿದಥೇಷು ವಿಷ್ಣೋ ಪಿನ್ವತಮಿಷೋ ವೃಜನೇಷ್ವಿಂದ್ರ ಓಂ ॥೬॥

ಇಂದ್ರ ಹಾಗು ವಿಷ್ಣು ಎಂಬ ಎರಡು ರೂಪಗಳುಳ್ಳ ಹೇ ಭಗವಂತನೆ ! ನೀನು ಬೃಹದ್ರೂಪವುಳ್ಳವನು. ಮಹಾಪರಾಕ್ರಮಿಯು ಆಗಿರುವಿ. ನಿನ್ನ ವಿಷಯಕವಾದುದರಿಂದ ಶ್ರೇಷ್ಠವೆನಿಸಿದ ನನ್ನ ಬುದ್ಧಿಯು ನಿನ್ನ ಅನುಗ್ರಹ ಬಲದಿಂದ ಅಭಿವೃದ್ಧವಾಗಿ ಯಜ್ಞದಲ್ಲಿ ನಿನ್ನ ಸ್ತೋತ್ರವನ್ನು ಮಾಡಿದೆ ಅರ್ಥಾತ್ ನಿನ್ನ ವಿಷಯಕವಾದುದರಿಂದ ಶ್ರೇಷ್ಠವಾದ ಹಾಗು ನಿನ್ನ ಅನುಗ್ರಹ ಬಲದಿಂದ ಅಭಿವೃದ್ಧವಾದ ಬುದ್ಧಿಯುಳ್ಳ ನಾನು ಯಜ್ಞದಲ್ಲಿ ನಿನ್ನನ್ನು ಸ್ತೋತ್ರಮಾಡಿದ್ದೇನೆ. ಆಪತ್ಕಾಲದಲ್ಲಿ ನೀನು ನಮಗೆ ಅನ್ನವನ್ನು ಕೊಡು. ॥೬॥

ಓಂ ವಷಟ್ ತೇ ವಿಷ್ಣವಾಸ ಆ ಕೃಣೋಮಿ ತನ್ಮೇ ಜುಷಸ್ವ ಶಿಪಿವಿಷ್ಟ ಹವ್ಯಮ್ । ವರ್ಧಂತು ತ್ವಾ ಸುಷ್ಟುತಯೋ ಗಿರೋ ಮೇ ಯೂಯಂ ಪಾತ ಸ್ವಸ್ತಿಭಿಃ ಸದಾ ನಃ ಓಂ ॥೭॥

ಐಶ್ವರ್ಯಾದಿ ಷಡ್ಗುಣಗಳುಳ್ಳ ಹೇ ವಿಷ್ಣುವೇ ! ನಾನು ನಿನ್ನವನಾಗಿ ನಿನ್ನನ್ನು ಯಜ್ಞದಲ್ಲಿ ಆಹ್ವಾನಿಸುತ್ತೇನೆ. ಪಶುಗಳಲ್ಲಿ ಯಜ್ಞರೂಪೇಣ ಪ್ರವಿಷ್ಟನಾದ ಹೇ ಭಗವಂತನೇ ! ನಾನು ಸಮರ್ಪಿಸಿದ ಚರುಪುರೋಡಾಶಾದಿ ಹವಿರ್ದ್ರವ್ಯಗಳನ್ನು ನೀನು ಸ್ವೀಕರಿಸು. ನಿನ್ನ ಗುಣಗಾನಮಾಡುವ ನನ್ನ ಮಾತುಗಳು ನಿನ್ನನ್ನು ಕಲ್ಯಾಣಗುಣಗಳಿಂದ ವಿಶಿಷ್ಟನನ್ನಾಗಿ ವ್ಯಕ್ತಮಾಡಲಿ. ನೀನು ಮಂಗಲಪ್ರದನಾಗಿ ನಮ್ಮನ್ನು ಯಾವಾಗಲೂ ರಕ್ಷಿಸು.

ಓಂ ನೂ ಮರ್ತೋ ದಯತೇ ಸನಿಷ್ಯನ್ ಯೋ ವಿಷ್ಣವ ಉರುಗಾಯಾಯ ದಾಶತ್ । ಪ್ರ ಯಃ ಸತ್ರಾಚಾ ಮನಸಾ ಯಜಾತ ಏತಾವಂತಂ ನರ್ಯಮಾವಿವಾಸಾತ್ ಓಂ ॥೮॥

ಶ್ರೀ ವಿಷ್ಣುವು ತನ್ನ ಪ್ರೀತಿಗಾಗಿ ಪೂರ್ವದಲ್ಲಿ ದಾನಮಾಡಿ ಈಗ ದಾನಮಾಡುತ್ತ ಮುಂದೆಯೂ ದಾನಮಾಡುವ ಹಾಗೂ ಶುದ್ಧ ಮನಸ್ಸಿನಿಂದ ಯಾಗಮಾಡುವ ಭಕ್ತಸಮೂಹವನ್ನು ಸಮೀಪದಲ್ಲಿ ಇರಿಸಿಕೊಂಡನು.

ಓಂ ತ್ವಂ ವಿಷ್ಣೋ ಸುಮತಿಂ ವಿಶ್ವಜನ್ಯಾಮಪ್ರಯುತಾಮೇವ-
ಯಾವೋ ಮತಿಂ ದಾಃ । ಪರ್ಚೋ ಯಥಾ ನಃ ಸುವಿತಸ್ಯ
ಭೂರೇರಶ್ವಾವತಃ ಪುರುಶ್ಚಂದ್ರಸ್ಯ ರಾಯಃ ಓಂ ॥೯॥

ಸರ್ವಜ್ಞಳಾದ ರಮೆಯನ್ನು ಹೊಂದಿದ ಹೇ ವಿಷ್ಣುವೇ ! ಸಮೀಚೀನಬುದ್ಧಿಯುಳ್ಳ ಬ್ರಹ್ಮದೇವರನ್ನು ಕುರಿತು ಜಗತ್ತನ್ನು ಸೃಷ್ಟಿಸುವುದಕ್ಕೆ ಬೇಕಾದ ಸರ್ವೋತ್ಕೃಷ್ಟವಾದ ಬುದ್ಧಿಯನ್ನು ಹೇಗೆ ಕೊಟ್ಟಿರುವೆಯೋ ಹಾಗೆ ಒಳ್ಳೆಯದಕ್ಕೆ ವಿನಿಯೋಗಿಸುವ ಅಶ್ವಗಜ ಇತ್ಯಾದಿಗಳ ಪ್ರಾಪ್ತಿಗೆ ಕಾರಣವಾದ ಬಹುಜನರಿಗೆ ಸಂತೋಷಕ್ಕೆ ಕಾರಣವಾದ ಬಹಳ ಸಂಪತ್ತನ್ನು ನಮಗೆ ಕೊಡು. ॥೯॥

ಓಂ ತ್ರಿರ್ದೇವಃ ಪೃಥಿವೀಮೇಷ ಏತಾಂ ವಿ ಚಕ್ರಮೇ ಶತರ್ಚಸಂ
ಮಹಿತ್ವಾ । ಪ್ರ ವಿಷ್ಣುರಸ್ತು ತವಸಸ್ತವೀಯಾನ್ ತ್ವೇಷಂ ಹ್ಯಸ್ಯ
ಸ್ಥವಿರಸ್ಯ ನಾಮ ಓಂ ॥೧೦॥

ವಿಷ್ಣುವು ಪೃಥಿವೀ ಹಾಗೂ ತದುಪಲಕ್ಷಿತ ಸರ್ವಲೋಕಗಳನ್ನು ಮೂರು ಪಾದಗಳಿಂದ ವ್ಯಾಪಿಸಿದನು. ಈ ಭಗವನ್ಮಹಿಮೆಯು ಅನಂತ ಋಕ್ಕುಗಳಿಂದ ಪ್ರತಿಪಾದ್ಯವಾಗಿದೆ. ವಿಷ್ಣುವು ದೇಶಕಾಲಾದಿಗಳಿಂದ ಪರಿಚ್ಛಿನ್ನರಾದ ಸೂರ್ಯದಿಗಳ ತೇಜಸ್ಸಿಗಿಂತಲೂ ಅಧಿಕತೇಜಸ್ಸುಳ್ಳವನು. ಅತ ಏವ ಅನಾದಿಕಾಲೀನನಾದ ಈ ವಿಷ್ಣುವಿಗೆ "ತ್ರಿವಿಕ್ರಮ"ನೆಂಬ ಪ್ರಸಿದ್ದ ಹೆಸರು ಇರುತ್ತದೆ. ಅಥವಾ 'ತ್ವೇಷ' ಎಂಬ ವೇದಪ್ರಸಿದ್ಧ ನಾಮವಿರುತ್ತದೆ. ॥೧೦॥

ಓಂ ವಿ ಚಕ್ರಮೇ ಪೃಥಿವೀಮೇಷ ಏತಾಂ ಕ್ಷೇತ್ರಾಯ
ವಿಷ್ಣುರ್ಮನುಷೇ ದಶಸ್ಯನ್ । ಧ್ರುವಾಸೋ ಅಸ್ಯ ಕೀರಯೋ
ಜನಾಸ ಉರುಕ್ಷಿತಿಂ ಸುಜನಿಮಾ ಚಕಾರ ಓಂ ॥೧೧॥

ಈ ವಿಷ್ಣುವೇ ಮನುಷ್ಯರಿಗೆ ವಾಸಮಾಡುವುದಕ್ಕಾಗಿ ಭೂಮಿಯನ್ನು ಕೊಡುವವನಾಗಿ ಪ್ರವೃತ್ತಿಗಾಗಿ ವ್ಯಾಪಿಸಿದನು. ಮನುಷ್ಯರು ಅವನಿಗೆ ಪ್ರಿಯವಾದ ಕರ್ಮವನ್ನು ಆಚರಿಸುವ ದಾಸರು. ಮನುಷ್ಯರಿಗಿಂತಲೂ ಉತ್ಕೃಷ್ಟ ದಾಸರಾದ ದೇವತೆಗಳ ವಾಸಸ್ಥಾನವನ್ನು (ದೇಹವನ್ನು) ಶುಕ್ಲಶೋಣಿತಸಂಬಂಧರಹಿತವನ್ನಾಗಿ ಮಾಡಿದನು. ॥೧೧॥

ಓಂ ಪ್ರ ತತ್ ತೇ ಅದ್ಯ ಶಿಪಿವಿಷ್ಟ ನಾಮಾಽರ್ಯಃ ಶಂಸಾಮಿ ವಯುನಾನಿ ವಿದ್ವಾನ್ । ತಂ ತ್ವಾ ಗೃಣಾಮಿ ತವಸಮತವ್ಯಾನ್ ಕ್ಷಯಂತಮಸ್ಯ ರಜಸಃ ಪರಾಕೇ ಓಂ ॥೧೨॥

ಹೇ ವಿಷ್ಣುವೇ ! ವೇದಪ್ರಸಿದ್ಧವಾದ ನಿನ್ನ ನಾಮವನ್ನು ಈಗ ಶಿಷ್ಯರಿಗೆ ಹೇಳುತ್ತೇನೆ ಶಿಷ್ಯರು ದೊರಕದಿದ್ದರೆ "ನಮ್ಮ ಜ್ಞಾನ ಇಷ್ಟು' ಎಂಬುವುದನ್ನು ಸ್ವಾಮಿಯಾದ ನೀನು ಅರಿತವನಾಗಿದ್ದಿ. ಆದ್ದರಿಂದ ಬಲಸ್ವರೂಪನಾದ ನಿನ್ನ ಭಕ್ತರಾಗದವರನ್ನು ನಾಶಮಾಡುವ ತಮೋಗುಣದಿಂದ ಅತೀತನಾದ ನಿನ್ನನ್ನು ಸ್ತುತಿಸುತ್ತೇನೆ. ॥೧೨॥

ಓಂ ಕಿಮಿತ್ ತೇ ವಿಷ್ಣೋ ಪರಿಚಕ್ಷ್ಯಂ ಭೂತ್ ಪ್ರ ಯದ್ ವವಕ್ಷೇ ಶಿಪಿವಿಷ್ಟೋ ಅಸ್ಮಿ । ಮಾ ವರ್ಪೋ ಅಸ್ಮದಪ ಗೂಹ ಏತದ್ ಯದನ್ಯರೂಪಃ ಸಮಿಥೇ ಬಭೂಥ ಓಂ ॥೧೩॥

ಹೇ ವಿಷ್ಣುವೇ ! ಹೀಗೆ ಪ್ರತ್ಯಾಖ್ಯಾನೀಯವಾದುದು ಯಾವುದಿರುತ್ತದೆ ? ನೀನು "ನಾನು ಪಶುಗಳಲ್ಲಿ ಪ್ರವಿಷ್ಟ' ಎಂದು ಹೇಳುತ್ತಿ. ನಿನ್ನ ರೂಪವು ನಮಗೆ ತೋರದಿರುವಂತೆ ಮಾಡಬೇಡ. ಒಂದು ರೂಪದಿಂದ ಯುದ್ಧದಲ್ಲಿ ಇದ್ದವನಾಗಿದ್ದಿ. ॥೧೩॥

ಓಂ ವಷಟ್ ತೇ ವಿಷ್ಣವಾಸ ಆ ಕೃಣೋಮಿ ತನ್ಮೇ ಜುಷಸ್ವ ಶಿಪಿವಿಷ್ಟ ಹವ್ಯಮ್ । ವರ್ಧಂತು ತ್ವಾ ಸುಷ್ಟುತಯೋ ಗಿರೋ ಮೇ ಯೂಯಂ ಪಾತ ಸ್ವಸ್ತಿಭಿಃ ಸದಾ ನಃ ಓಂ ॥೧೪॥

ಐಶ್ವರ್ಯಾದಿ ಷಡ್ಗುಣಗಳುಳ್ಳ ಹೇ ವಿಷ್ಣುವೇ ! ನಾನು ನಿನ್ನವನಾಗಿ ನಿನ್ನನ್ನು ಯಜ್ಞದಲ್ಲಿ ಆಹ್ವಾನಿಸುತ್ತೇನೆ. ಪಶುಗಳಲ್ಲಿ ಯಜ್ಞರೂಪೇಣ ಪ್ರವಿಷ್ಟನಾದ ಹೇ ಭಗವಂತನೇ ! ನಾನು ಸಮರ್ಪಿಸಿದ ಚರುಪುರೋಡಾಶಾದಿ ಹವಿರ್ದ್ರವ್ಯಗಳನ್ನು ನೀನು ಸ್ವೀಕರಿಸು. ನಿನ್ನ ಗುಣಗಾನಮಾಡುವ ನನ್ನ ಮಾತುಗಳು ನಿನ್ನನ್ನು ಕಲ್ಯಾಣಗುಣಗಳಿಂದ ವಿಶಿಷ್ಟನನ್ನಾಗಿ ವ್ಯಕ್ತಮಾಡಲಿ. ನೀನು ಮಂಗಲಪ್ರದನಾಗಿ ನಮ್ಮನ್ನು ಯಾವಾಗಲೂ ರಕ್ಷಿಸು.

ಇಲ್ಲಿಗೆ ವಿಷ್ಣುಸೂಕ್ತ ಮಂತ್ರವ್ಯಾಖ್ಯಾನವು ಮುಗಿಯಿತು.

## ೩.೨ ಚಾತುರ್ದಶರ್ಚ ವಿಶ್ವಕರ್ಮಾಖ್ಯವಿಷ್ಣುಸೂಕ್ತಮಂತ್ರ

ಓಂ ಯ ಇಮಾ ವಿಶ್ವಾ ಭುವನಾನಿ ಜುಹ್ವದೃಷಿರ್ಹೋತಾ
ನ್ಯಸೀದತ್ ಪಿತಾ ನಃ । ಸ ಆಶಿಷಾ ದ್ರವಿಣಮಿಚ್ಛಮಾನಃ
ಪ್ರಥಮಚ್ಛದವರಾ ಆವಿವೇಶ ಓಂ ॥೧॥

ಜ್ಞಾನಿಯಾದ 'ವಿಶ್ವಕರ್ಮ'ನಾಮಕ ಭಗವಂತನು ಹೋತೃವಾಗಿ ಈ ಎಲ್ಲ ಲೋಕಗಳನ್ನು ಆಹುತಿಯನ್ನಾಗಿ ಮಾಡಿಕೊಂಡನು. ಮುಖ್ಯ ಆಚ್ಛಾದಕನಾದ ಅಥವಾ ಮುಖ್ಯ ಪೂಜ್ಯನಾದ ಆ ಭಗವಂತನು ನಮ್ಮೆಲ್ಲರ ಉತ್ಪಾದಕನಾಗಿ ತಂದೆಯಂತೆ ನಾವು ಮಾಡಿದ ತನ್ನ ಸೇವೆಯಿಂದ ತೃಪ್ತನಾಗಿ ಕೊಟ್ಟ ಆಶೀರ್ವಾದದ ಫಲವಾಗಿ ಧನವನ್ನು ಬಯಸುವವನಾಗಿ ತನಗಿಂತ ಅವರರಾದ ಬ್ರಹ್ಮಾದಿಗಳನ್ನು ನಿರ್ಮಿಸಿ ಅವರೊಳಗೆ ಪ್ರವೇಶಿಸಿದನು.

ಓಂ ಕಿಂ ಸ್ವಿದಾಸೀದಧಿಷ್ಠಾನಮಾರಂಭಣಂ ಕತಮತ್ ಸ್ವಿತ್
ಕಥಾಽಽಸೀತ್ । ಯತೋ ಭೂಮಿಂ ಜನಯನ್ ವಿಶ್ವಕರ್ಮಾ ವಿ
ದ್ಯಾಮೌರ್ಣೋನ್ಮಹಿನಾ ವಿಶ್ವಚಕ್ಷಾಃ ಓಂ ॥೨॥

ವಿಶ್ವಕರ್ಮನಾಮಕ ಪರಮಾತ್ಮನು ಯಾವ ಸಾಧನದಿಂದ ದ್ಯುಲೋಕ ಹಾಗು ಭೂಲೋಕಗಳನ್ನು ಸೃಷ್ಟಿಸಿದವನಾಗಿ ವಿಶೇಷೇಣ ಇದ್ದನು ? ತನ್ನ ಸಾಮರ್ಥ್ಯದಿಂದ ಸರ್ವವನ್ನು ಕಾಣುವ ಶ್ರೀಹರಿಯು ಆಚ್ಛಾದನಮಾಡಿದ ಅಧಿಷ್ಠಾನವು ಇತ್ತೇ ? ಹೇಗಿತ್ತು? ಜಗತ್ತಿಗೆ ಉಪಾದಾನಕಾರಣವಾದ ಪ್ರಕೃತಿತತ್ತ್ವವು ಏನಾಗಿತ್ತು ? ಹೇಗೆ ಇತ್ತು?

ಈ ಮಂತ್ರವು ಆಕ್ಷೇಪ ಪರವಾಗಿದೆ. ಸ್ವತಂತ್ರವಾಗಿ ಯಾವುದೂ ಇರಲಿಲ್ಲವೆಂಬುದು ಈ ಮಂತ್ರದ ಅಭಿಪ್ರಾಯವು.

ಓಂ ವಿಶ್ವತಶ್ಚಕ್ಷುರುತ ವಿಶ್ವತೋಮುಖೋ ವಿಶ್ವತೋಬಾಹುರುತ
ವಿಶ್ವತಸ್ಪಾತ್ । ಸಂ ಬಾಹುಭ್ಯಾಂ ಧಮತಿ ಸಂ ಪತತ್ರೈರ್ದ್ಯಾವಾ-
ಭೂಮೀ ಜನಯನ್ ದೇವ ಏಕಃ ಓಂ ॥೩॥

ಸರ್ವತ್ರ ಕಣ್ಣುಗಳುಳ್ಳವನು, ಸರ್ವತ್ರ ಮುಖಗಳುಳ್ಳವನು, ಸರ್ವತ್ರ ಬಾಹುಗಳುಳ್ಳ-ವನು, ಸರ್ವತ್ರ ಪಾದಗಳುಳ್ಳವನು, ಅದ್ವಿತೀಯನು ಆದ ಆ ವಿಶ್ವಕರ್ಮನಾಮಕ

ಭಗವಂತನು ದ್ಯುಲೋಕ ಹಾಗು ಭೂಲೋಕಗಳನ್ನು ಸೃಷ್ಟಿಸುವವನಾಗಿ ತನ್ನ ಸ್ವರೂಪಭೂತವಾದ ಪ್ರಧಾನವಾದ ಎರಡು ಬಾಹುಗಳಿಂದ ಹಾಗು ಸ್ವಭಾವತಃ ಸಾತ್ವಿಕರಾಗಿದ್ದು ಪತಿತರಾಗುತ್ತಿರುವವರನ್ನು ರೆಕ್ಕೆಗಳಂತೆ ರಕ್ಷಿಸುವ ಉಳಿದ ಬಾಹುಗಳಿಂದ ಅಗ್ನ್ಯಾದಿಭೂತಗಳ ಸಂಯೋಜನ ಮಾಡುತ್ತಾನೆ. ಅಥವಾ ಮೋದ ಪ್ರಮೋದಾಖ್ಯ ಪ್ರದ್ಯುಮ್ನ ಅನಿರುದ್ಧ ರೂಪಗಳಿಂದ ವಿಶ್ವವನ್ನು ಪ್ರವೇಶಿಸುತ್ತಾನೆ. ಅಥವಾ ಕಾಲ ಸಂಕರ್ಷಣ ಎಂಬ ರೂಪಗಳಿಂದ ವಿಶ್ವಸಂಹಾರಕನಾಗುತ್ತಾನೆ.

ಓಂ ಕಿಂ ಸ್ವಿದ್ವನಂ ಕ ಉ ಸ ವೃಕ್ಷ ಆಸ ಯತೋ ದ್ಯಾವಾಪೃಥಿವೀ
ನಿಷ್ಟತಕ್ಷುಃ । ಮನೀಷಿಣೋ ಮನಸಾ ಪೃಚ್ಛತೇದು ತದ್
ಯದಧ್ಯತಿಷ್ಠದ್ಭುವನಾನಿ ಧಾರಯನ್ ಓಂ ॥೪॥

ವಿಶ್ವಕರ್ಮನಾಮಕ ಭಗವಂತನು ಲೋಕಗಳನ್ನು ಧಾರಣಮಾಡುವನಾಗಿ ಯಾವ ಅಧಿಷ್ಠಾನವನ್ನು ಆಶ್ರಯಿಸಿದ್ದನೋ ಲಯಕಾಲದಲ್ಲಿ ಆ ವನವು ಇತ್ತೇ? ಆವ್ಯಕ್ತವು ಇತ್ತೇ ? ಯಾವದೂ ಇರಲಿಲ್ಲ. ಜ್ಞಾನಿಗಳು ದ್ಯುಲೋಕ ಪೃಥಿವೀ ಲೋಕಗಳನ್ನೇ ಆ ಕಾಲದಲ್ಲಿ ಇಲ್ಲವೆಂದು ಹೇಳುತ್ತಾರೆ. ಹೀಗಿರುವಾಗ ವನಾದಿಗಳ ಪಾಡೇನು ? ಹೀಗೆ ವಿಚಾರಿಸಿ ತಿಳಿದವರಾಗಿದ್ದರೂ ತಮ್ಮ ಜ್ಞಾನದ ದಾರ್ಢ್ಯಕ್ಕಾಗಿ ಅದೇ ವಿಷಯವನ್ನೇ ಕೇಳಿದರು.

ಅಥವಾ ಭಗವದಧಿಷ್ಠಿತವಾದ ಪದವು ವನವೋ ಅಥವಾ ವೃಕ್ಷವೋ ಎಂದು ಜ್ಞಾನಿಗಳು ನಿರ್ಧರಿಸುವುದಕ್ಕಾಗಿ ದ್ಯುಲೋಕಪೃಥಿವೀಲೋಕಗಳೊಳಗೆ ವಿಚಾರಿಸಿ ಹುಡುಕಿದರೂ ದಾರಿ ತೋರದೆ ಅದೇ ವಿಷಯವನ್ನೇ ಕೇಳಿದರು ಎಂಬ ಅಭಿಪ್ರಾಯವನ್ನು ಹೇಳಬಹುದು.

ಓಂ ಯಾ ತೇ ಧಾಮಾನಿ ಪರಮಾಣಿ ಯಾವಮಾ ಯಾ
ಮಧ್ಯಮಾ ವಿಶ್ವಕರ್ಮನ್ನುತೇಮಾ । ಶಿಕ್ಷಾ ಸಖಿಭ್ಯೋ ಹವಿಷಿ
ಸ್ವಧಾವಃ ಸ್ವಯಂ ಯಜಸ್ವ ತನ್ವಂ ವೃಧಾನಃ ಓಂ ॥೫॥

ಹೇ ವಿಶ್ವಕರ್ಮಾಖ್ಯ ಭಗವಂತನೇ ! ನಿನ್ನಿಂದ ಅಧಿಷ್ಠಿತವಾದ ಉತ್ತಮಸ್ಥಾನಗಳು ಯಾವು ? ಮಧ್ಯಮಸ್ಥಾನಗಳು ಯಾವು ? ಅಧಮಸ್ಥಾನಗಳು ಯಾವು ? ಹೇ ಸುಖಪೂರ್ಣನೆ ! ಹವಿಸ್ಸನ್ನು ಕೊಡುವುದರಲ್ಲಿ ಮಿತ್ರಸ್ಥಾನೀಯರಾದ ನಮಗೆ ನಿನ್ನ ಸ್ಥಾನಗಳನ್ನು ತಿಳಿಸು. ಸ್ವಯಂ ಪರಿಪೂರ್ಣನಾದ ನೀನು ನಿನ್ನ ಸ್ವರೂಪವನ್ನು ನಾವು ಪೂಜಿಸುವಂತೆ ಮಾಡು.

ಓಂ ವಿಶ್ವಕರ್ಮನ್ ಹವಿಷಾ ವಾವೃಧಾನಃ ಸ್ವಯಂ ಯಜಸ್ವ
ಪೃಥಿವೀಮುತ ದ್ಯಾಮ್ । ಮುಹ್ಯಂತ್ವನ್ಯೇ ಅಭಿತೋ ಜನಾಸ
ಇಹಾಸ್ಮಾಕಂ ಮಘವಾ ಸೂರಿರಸ್ತು ಓಂ ॥೬॥

ಹೇ ವಿಶ್ವಕರ್ಮನೇ ! ನಮ್ಮ ಹವಿರರ್ಪಣರೂಪವಾದ ಪೂಜೆಯಿಂದ ಅಭಿವೃದ್ಧ (ಸಂತುಷ್ಟ)ನಾದವನಾಗಿ ನೀನು ಭೂಲೋಕದಲ್ಲಿರುವ ಜೀವರಿಗೆ ದ್ಯುಲೋಕದಲ್ಲಿರುವ ದೇವತೆಗಳಿಗೆ ಫಲವನ್ನು ಕೊಡುವ ಮೂಲಕ ಕರುಣೆಯನ್ನು ತೋರಿಸು. ನಿನ್ನನ್ನು ಸರಿಯಾಗಿ ಅರಿಯದ ಅಸುರರು ನಿನ್ನ ಸರ್ವೋತ್ತಮತ್ವಾದಿಗಳ ವಿಷಯದಲ್ಲಿ ತಪ್ಪು ತಿಳುವಳಿಕೆಯುಳ್ಳವರಾಗಲಿ. ಸರ್ವಜ್ಞನಾದ ಸರ್ವಪೂಜ್ಯನಾದ ನೀನು ನಿನ್ನ ತತ್ತ್ವಜ್ಞಾನಮಾಡಿಕೊಳ್ಳುವುದಕ್ಕೆ ನಮಗೆ ಅನುಕೂಲನಾಗು.

ಓಂ ವಾಚಸ್ಪತಿಂ ವಿಶ್ವಕರ್ಮಾಣಮೂತಯೇ ಮನೋಜುವಂ
ವಾಜೇ ಅದ್ಯಾ ಹುವೇಮ । ಸ ನೋ ವಿಶ್ವಾನಿ ಹವನಾನಿ
ಜೋಷದ್ ವಿಶ್ವಶಂಭೂರವಸೇ ಸಾಧುಕರ್ಮಾ ಓಂ ॥೭॥

ಸರ್ವವಾಙ್ನಿಯಾಮಕನಾದ ಭಕ್ತರಕ್ಷಣೆಗಾಗಿ ಮನೋವೇಗಕ್ಕಿಂತಲೂ ಅಧಿಕವೇಗದಿಂದ ಗಮನಮಾಡುವ ವಿಶ್ವಕರ್ಮನನ್ನು ಅನ್ನಪ್ರಾಪ್ತಿಗಾಗಿ ಆಹ್ವಾನಿಸುತ್ತೇವೆ. ಸರ್ವರಿಗೂ ಸುಖಪ್ರದನಾದ ಶುದ್ಧವಾದ ಕರ್ಮವುಳ್ಳ ಆ ವಿಷ್ಣುವು ನಮ್ಮ ರಕ್ಷಣೆಗಾಗಿ ಹಾಗು ಅನ್ನಪ್ರಾಪ್ತಿಗಾಗಿ ನಾವು ಮಾಡಿದ ಆಹ್ವಾನಗಳನ್ನು ಕೇಳಲಿ.

ಓಂ ಚಕ್ಷುಷಃ ಪಿತಾ ಮನಸಾ ಹಿ ಧೀರೋ ಘೃತಮೇನೇ
ಅಜನನ್ನಮ್ನಮಾನೇ । ಯದೇದಂತಾ ಅದದೃಹಂತ ಪೂರ್ವ
ಆದಿದ್ದ್ಯಾವಾಪೃಥಿವೀ ಅಪ್ರಥೇತಾಮ್ ಓಂ ॥೮॥

ಜ್ಞಾನಾನಂದಸ್ವರೂಪಿಯಾದ ಭಗವಂತನು ಪ್ರಕಾಶಮಾನವಾದ ತನ್ನ ಸ್ವರೂಪವನ್ನು ತಿಳಿಯುವ ವಿಷಯದಲ್ಲಿ ಅತಿಶಯೇನ ವಿನಮ್ರವಾದ ಚಕ್ಷುರ್ಮನಸ್ಸುಗಳನ್ನು ಹಾಗು ತದಭಿಮಾನಿದೇವತೆಗಳಾದ ಸೂರ್ಯಚಂದ್ರರನ್ನು ಸೃಷ್ಟಿಸಿದ ಕಾರಣ ತದುತ್ಪಾದಕನೆಂದು ಪ್ರಸಿದ್ಧನಾದನು. ಈ ವಿಷ್ಣುವಿನಿಂದಲೇ ದ್ಯುಲೋಕ ಹಾಗು ಪೃಥಿವೀ ಲೋಕಗಳು ವಿಸ್ತೃತವಾದವು. ಹೀಗೆ ನಿಶ್ಚಾಯಕ ಪ್ರಮಾಣವಿರುವಾಗ 'ವಿಷ್ಣುವೇ ಇಲ್ಲ' 'ಅವನು ಸೃಷ್ಟಿಕರ್ತೃವಲ್ಲ' ಇವೇ ಮೊದಲಾದ ಪೂರ್ವಪಕ್ಷಗಳಿಗೆ ಅವಕಾಶವಿಲ್ಲ.

ಓಂ ವಿಶ್ವಕರ್ಮಾ ವಿಮನಾ ಆದ್ವಿಹಾಯಾ ಧಾತಾ ವಿಧಾತಾ
ಪರಮೋತ ಸಂದೃಕ್ । ತೇಷಾಮಿಷ್ಟಾನಿ ಸಮಿಷಾ ಮದಂತಿ
ಯತ್ರಾ ಸಪ್ತಋಷೀನ್ ಪರ ಏಕಮಾಹುಃ ಓಂ ॥೯॥

ಸರ್ವಕರ್ತೃವಾದ ಪರಮಾತ್ಮನು ಮನಸ್ಸನ್ನು ಸೃಷ್ಟಿಸಿದ ಕಾರಣ ವಿಶಿಷ್ಟಜ್ಞಾನವುಳ್ಳವನು. ತನಗೆ ಸೂರ್ಯಚಂದ್ರರು ವಿನೀತರಾದ ಕಾರಣ ಮಹಾನ್ನಾದನು. ಭೂಮಿಜನಕನಾದುದರಿಂದ ಸರ್ವಧಾರಕನು, ದ್ಯುಲೋಕಜನಕನಾದುದರಿಂದ ವಿಶೇಷವಾಗಿ ಪೋಷಕನು, ಸೂರ್ಯಜನಕನಾದುದರಿಂದ ಮಹಾನಿರ್ದೋಷ ದೃಷ್ಟಿಯುಳ್ಳವನು ಆದನು. ಈ ಭಗವಂತನಿಗೆ ಸಪ್ತಋಷಿಗಳೆಂದು ಪ್ರಸಿದ್ಧರಾದ ಕಶ್ಯಪಾದಿಗಳು ಸಮರ್ಪಿಸಿದ ಅನ್ನದಿಂದಲೇ ಅವರ ಅಭೀಷ್ಟಗಳು ಪೂರ್ಣವಾಗುತ್ತವೆ.

ಓಂ ಯೋ ನಃ ಪಿತಾ ಜನಿತಾ ಯೋ ವಿಧಾತಾ ಧಾಮಾನಿ ವೇದ
ಭುವನಾನಿ ವಿಶ್ವಾ । ಯೋ ದೇವಾನಾಂ ನಾಮಧಾ ಏಕ ಏವ ತಂ
ಸಂ ಪ್ರಶ್ನಂ ಭುವನಾ ಯಂತ್ಯನ್ಯಾ ಓಂ ॥೧೦॥

ನಮಗೆ ಪಾಲಕನು, ಜನಕನು, ವಿಶೇಷತಃ ಪೋಷಕನು ಹಾಗು ಸತ್ಯಲೋಕಾದಿ ಸರ್ವಲೋಕಗಳನ್ನು ತದಂತರ್ಗತಧಾಮಗಳನ್ನು ತಿಳಿದವನು ಅಥವಾ ದೇವತೆಗಳಿಗೆ ಯಥಾಯೋಗ್ಯವಾಗಿ ಸತ್ಯಲೋಕಾದಿಗಳನ್ನು ಆಳಲು (ಅವುಗಳ ಆಧಿಪತ್ಯನಡೆಸಲು) ಕೊಟ್ಟವನು, ಮುಖ್ಯವೃತ್ತಿಯಿಂದ ದೇವತಾವಾಚಕ ಬ್ರಹ್ಮರುದ್ರಇಂದ್ರ ಇವೇ ಮೊದಲಾದ ಸರ್ವಶಬ್ದಗಳಿಂದ ವಾಚ್ಯನು ಆದ ಭಗವಂತನನ್ನು ಉದ್ದೇಶಿಸಿ ಅಧಿಕಾರಿಗಳು ಸತ್ಯಲೋಕಾದಿಗಳಿಗಿಂತಲೂ ವಿಲಕ್ಷಣಗಳಾದ ವೈಕುಂಠಾದಿಲೋಕಗಳನ್ನು ಹೊಂದುತ್ತಾರೆ.

ಓಂ ತ ಆಯಜಂತ ದ್ರವಿಣಂ ಸಮಸ್ಮಾ ಋಷಯಃ ಪೂರ್ವೇ
ಜರಿತಾರೋ ನ ಭೂನಾ । ಅಸೂರ್ತೇ ಸೂರ್ತೇ ರಜಸಿ ನಿಷತ್ತೇ
ಯೇ ಭೂತಾನಿ ಸಮಕೃಣ್ವನ್ನಿಮಾನಿ ಓಂ ॥೧೧॥

ತ್ರಿಗುಣಾತ್ಮಕವಾದ ಜಡಪ್ರಕೃತಿಯು ಸ್ವತಃ ಯಾವ ಕಾರ್ಯಮಾಡಲೂ ಸಮರ್ಥವಾಗದಿರುವಾಗ ಭಗವಂತನಿಂದ ಪ್ರೇರಿತರಾದ ಬ್ರಹ್ಮಾದಿಗಳು ಈ ಪ್ರತ್ಯಕ್ಷಸಿದ್ಧವಾದ ಭೂತಗಳನ್ನು ಸೃಷ್ಟಿಸಿದರು. ಆ ಬ್ರಹ್ಮಾದಿಗಳೂ ಸಾಕಲ್ಯೇನ ಹರಿಗುಣಗಳನ್ನು ಕೊಂಡಾಡಲು ಸಮರ್ಥರಲ್ಲ. ಅವರು ಭಗವತ್ಪ್ರೀತಿಗಾಗಿ ಶುದ್ಧವಾದ ಘೃತಾದಿ ಹವಿರ್ದ್ರವ್ಯಗಳಿಂದ ಭಕ್ತ್ಯಾದ್ಯತಿಶಯದಿಂದ ವಿಷ್ಣುವನ್ನು ಯಜಿಸಿದರು.

ಓಂ ಪರೋ ದಿವಾ ಪರ ಏನಾ ಪೃಥಿವ್ಯಾ ಪರೋ ದೇವೇಭಿರಸುರ್ರೈರ್ಯದಸ್ತಿ । ಕಂ ಸ್ವಿದ್ಗರ್ಭಂ ಪ್ರಥಮಂ ದಧ್ರ ಆಪೋ ಯತ್ರ ದೇವಾಃ ಸಮಪಶ್ಯಂತ ವಿಶ್ವೇ ಓಂ ॥೧೨॥

ಪರಿಮಿತಿಯಲ್ಲಿ ದಿವಃಪರನಾದ, ಪೃಥಿವಿಗೂ ಪರನಾದ, ದೇವತೆಗಳಿಗಿಂತ ಹಾಗು ಅಸುರರಿಗಿಂತ ಶ್ರೇಷ್ಠನಾದ, ಚೆನ್ನಾಗಿ ಭಕ್ತರನ್ನು ರಕ್ಷಿಸುವ ಆ ಶ್ರೀಹರಿಯು ರಮೆಯಲ್ಲಿ ಮೊದಲು ಉದಕರೂಪವಾದ ಗರ್ಭವನ್ನು ಆಧಾನಮಾಡಿದನು. ಆ ಉದಕದಲ್ಲಿಯೇ ಎಲ್ಲ ದೇವತೆಗಳು ವಿಷ್ಣುವನ್ನು ಕಂಡಿದ್ದರು. (ಕಂಡರು)

ಓಂ ತಮಿದ್ಗರ್ಭಂ ಪ್ರಥಮಂ ದಧ್ರ ಆಪೋ ಯತ್ರ ದೇವಾಃ ಸಮಗಚ್ಛಂತ ವಿಶ್ವೇ । ಅಜಸ್ಯ ನಾಭಾವಧ್ಯೇಕಮರ್ಪಿತಂ ಯಸ್ಮಿನ್ ವಿಶ್ವಾನಿ ಭುವನಾನಿ ತಸ್ಥುಃ ಓಂ ॥೧೩॥

ಜಲವು ಸರ್ವರಿಗೂ ಆದ್ಯನಾದ ಆ ವಿಷ್ಣುವನ್ನೇ ಗರ್ಭರೂಪವಾಗಿ ಧರಿಸಿತು. ಆ ವಿಷ್ಣುವಿನಲ್ಲಿ ಎಲ್ಲ ದೇವತೆಗಳು ಉತ್ಪತ್ತಿಗಾಗಿ ಸೇರಿದರು. ಆ ಜಲದಲ್ಲಿರುವ ವಿಷ್ಣುವಿನ ನಾಭಿಯಲ್ಲಿ ಒಂದು ಪದ್ಮವು ಅಧಿಷ್ಠಿತವಾಗಿತ್ತು. ಆ ಪದ್ಮದಲ್ಲಿ ಎಲ್ಲ ಲೋಕಗಳು ಸನ್ನಿಹಿತವಾಗಿದ್ದವು.

ಓಂ ನ ತಂ ವಿದಾಥ ಯ ಇಮಾ ಜಜಾನಾಽನ್ಯದ್ಯುಷ್ಮಾಕಮಂತರಂ ಬಭೂವ । ನೀಹಾರೇಣ ಪ್ರಾವೃತಾ ಜಲ್ಪ್ಯಾ ಚಾಽಸುತೃಪ ಉಕ್ಥಶಾಸಶ್ಚರಂತಿ ಓಂ ॥೧೪॥

ಈ ಲೋಕಗಳನ್ನು ಸೃಷ್ಟಿಸಿದ, ನಿಮ್ಮೆಲ್ಲರಿಂದ ವಿಲಕ್ಷಣನಾದ, ನಿಮ್ಮ ಅಂತರ್ಯಾಮಿಯಾಗಿರುವ ಆ ವಿಷ್ಣುವನ್ನು ನೀವು ತಿಳಿದಿಲ್ಲ. ಕೇವಲ ಉಣ್ಣುವುದು ಮಲಗುವುದು ಇವೇ ಮೊದಲಾದ ಬದುಕಿನಲ್ಲೇ ತೃಪ್ತಿಪಡುವ ಅಥವಾ ಸುಖರೂಪಿಯಾದ ವಿಷ್ಣುವನ್ನು ತೃಪ್ತಿಗೊಳಿಸದ ಅಯೋಗ್ಯರು 'ನಾವು ಶಾಸ್ತ್ರವನ್ನು ಉಪದೇಶಿಸುವವರು' ಎಂಬ ಅಭಿಮಾನವುಳ್ಳವರಾಗಿ ಅನ್ಯಥಾ ಉಪದೇಶಿಸುತ್ತಾರೆ. ಅವರ ವಚನರೂಪವಾದ ಅಜ್ಞಾನಸ್ಥಾನೀಯವಾದ ಪರದೆಯಿಂದ ನಿಮ್ಮ ಸ್ವರೂಪವು ಆವೃತವಾಗಿದೆ. ಆದ್ದರಿಂದ ನೀವು ಆ ವಿಷ್ಣುವನ್ನು ತಿಳಿದಿಲ್ಲ.

ಇಲ್ಲಿಗೆ ವಿಶ್ವಕರ್ಮಾಖ್ಯವಿಷ್ಣುಸೂಕ್ತಮಂತ್ರವ್ಯಾಖ್ಯಾನವು ಮುಗಿಯಿತು.

### ೩೩. ಅಂಭೃಣೀಸೂಕ್ತಮಂತ್ರ

ಈ ಮಂತ್ರದಿಂದ ಆರಂಭಿಸಿ ಮುಖ್ಯತಃ ಎಲ್ಲ ಮಂತ್ರಗಳೂ ವಿಷ್ಣುಪರವೇ. ಅಮುಖ್ಯವಾಗಿ ರಮಾದಿಗಳು ಪ್ರತಿಪಾದ್ಯರು. "ಅಹಂ ರುದ್ರೇಭಿಃ" ಇತ್ಯಾದಿ ಎಂಟು ಋಕ್‌ಸಹಿತವಾದ ಈ ಸೂಕ್ತಕ್ಕೆ ಮುಖ್ಯತಃ ವಿಷ್ಣುವು ಋಷಿಯಾಗಿರುವುದರಿಂದ ಈ ಸೂಕ್ತವು ಮುಖ್ಯತಃ ವಿಷ್ಣುಪರ. ಇಲ್ಲಿ ಮೊದಲನೆ ಋಕ್ಕನ್ನು ಹೇಳುತ್ತಾರೆ.

ಓಂ ಅಹಂ ರುದ್ರೇಭಿರ್ವಸುಭಿಶ್ಚರಾಮ್ಯಹಮಾದಿತ್ಯೈರುತ
ವಿಶ್ವದೇವೈಃ । ಅಹಂ ಮಿತ್ರಾವರುಣೋಭಾ ಬಿಭರ್ಮ್ಯಹ-
ಮಿಂದ್ರಾಗ್ನೀ ಅಹಮಶ್ವಿನೋಭಾ ಓಂ ॥೧॥

ನಾನು ಏಕಾದಶ(೧೧) ರುದ್ರರಿಂದ ಹಾಗು ಅಷ್ಟ(೮) ವಸುಗಳಿಂದ ಪರಿವೃತನಾಗಿ ಪ್ರದೇಶದಲ್ಲಿ ಸಂಚರಿಸುತ್ತೇನೆ. ನಾನು ದ್ವಾದಶ(೧೨)ಸಂಖ್ಯಾಕರಾದ ಆದಿತ್ಯರಿಂದ ಮತ್ತು ತ್ರಯೋದಶ(೧೩)ಸಂಖ್ಯಾಕರಾದ ವಿಶ್ವೇದೇವತೆಗಳಿಂದ ಪರಿವೃತನಾಗಿ ಪ್ರದೇಶದಲ್ಲಿ ಸಂಚರಿಸುತ್ತೇನೆ ನಾನು ಮಿತ್ರಾವರುಣರಿಬ್ಬರನ್ನೂ ಪೋಷಿಸುತ್ತೇನೆ. ಇಂದ್ರ ಅಗ್ನಿ ಇಬ್ಬರನ್ನು ಹಾಗೆ ಇಬ್ಬರು ಅಶ್ವಿನೀದೇವತೆಗಳನ್ನು ಪೋಷಿಸುತ್ತೇನೆ.

ರಮಾಪಕ್ಷದಲ್ಲಿ ಇದೇ ಅಭಿಪ್ರಾಯವಿರುತ್ತದೆ. ಸರ್ವತ್ರ ವಿಷ್ಣುಪಕ್ಷದಲ್ಲಿ ಅಹಂಪದೇನ ವಿಷ್ಣುವನ್ನು ರಮಾ ಪಕ್ಷದಲ್ಲಿ ರಮೆಯನ್ನು ವಿವಕ್ಷಿಸಬೇಕು.

ವಿಶೇಷ :- ಅಹಂ ಎಂಬ ಪದವನ್ನು ಪುನಃ ಪುನಃ ಪ್ರಯೋಗಮಾಡುವದರಿಂದ ಸಂಚಲನ ಹಾಗು ಪೋಷಣರೂಪಕಾರ್ಯದಲ್ಲಿ ನಿರತಿಶಯಸ್ವಾತಂತ್ರ್ಯವು ವಿಷ್ಣುವಿಗೆ ಇರುತ್ತದೆ. ವಿಷ್ಣುವನ್ನು ಬಿಟ್ಟು ಉಳಿದವರ ವಿಷಯದಲ್ಲಿ ರಮಾದೇವಿಗೂ ಸ್ವಾತಂತ್ರ್ಯವಿದೆ ಎಂಬುವುದನ್ನು ಶ್ರುತಿಯು ಸೂಚಿಸುತ್ತದೆ.

ಓಂ ಅಹಂ ಸೋಮಮಾಹನಸಂ ಬಿಭರ್ಮ್ಯಹಂ ತ್ವಷ್ಟಾರಮುತ
ಪೂಷಣಂ ಭಗಮ್ । ಅಹಂ ದಧಾಮಿ ದ್ರವಿಣಂ ಹವಿಷ್ಮತೇ
ಸುಪ್ರಾವ್ಯೇಃ ಯಜಮಾನಾಯ ಸುನ್ವತೇ ಓಂ ॥೨॥

ನಾನು ಯಜ್ಞದಲ್ಲಿ ಅಭಿಷವಣ ಮಾಡುವ ಸೋಮಲತೆಗೆ ಅಭಿಮಾನಿಯಾದ ಚಂದ್ರನನ್ನು ಮತ್ತು ತ್ವಷ್ಟ್ರದೇವತೆಯನ್ನು ಪೂಷಾನನ್ನು ಭಗ ಎಂಬ ದೇವತೆಯನ್ನು ಪೋಷಿಸುತ್ತೇನೆ. ನಾನು ಚರುಪುರೋಡಾಶಾದಿ ಯಜ್ಞೋಪಯುಕ್ತದ್ರವ್ಯಗಳುಳ್ಳ, ಸೋಮಲತೆಯ ಅಭಿಷವಣ ಮಾಡುವ, (ಸೋಮಲತೆಯನ್ನು ಹಿಂಡುವ) ಹಾಗು

ಚೆನ್ನಾಗಿ(ಪ್ರಕರ್ಷೇಣ)ವಿಷ್ಣುವನ್ನು ತಿಳಿದಿರುವ ಯಜಮಾನನಿಗೆ ಸಂಪತ್ತನ್ನು ಕೊಡುತ್ತೇನೆ.

ರಮಾಪಕ್ಷದಲ್ಲಿಯೂ ಇದೇ ಅಭಿಪ್ರಾಯವಿರುತ್ತದೆ.

ಓಂ ಅಹಂ ರಾಷ್ಟ್ರೀ ಸಂಗಮನೀ ವಸೂನಾಂ ಚಿಕಿತುಷೀ ಪ್ರಥಮಾ
ಯಜ್ಞಿಯಾನಾಮ್ । ತಾಂ ಮಾ ದೇವಾ ವ್ಯದಧುಃ ಪುರುತ್ರಾ
ಭೂರಿಸ್ಥಾತ್ರಾಂ ಭೂರ್ಯಾವೇಶಯಂತೀಮ್ ಓಂ ॥೩॥

ನಾನು ರಾಜ್ಞಿಯು. (ರಾಣಿಯು) ಯಜ್ಞಕ್ಕೆ ಉಪಯುಕ್ತವಾದ ಪದಾರ್ಥಗಳನ್ನು ದೊರಕಿಸಿಕೊಡುವವಳು. ಅನಾದಿತಃ ಸರ್ವತ್ರ ವಾಸಮಾಡಿದವಳು. ಸ್ವತಃ ಅನೇಕ ಸ್ಥಾನಗಳಲ್ಲಿ ದೇವತೆಗಳನ್ನು ಇರಿಸಿದ ನನ್ನನ್ನು ದೇವತೆಗಳು ಪೂಜಿಸುವುದಕ್ಕಾಗಿ ಅನೇಕ ಸ್ಥಳಗಳಲ್ಲಿ ಇರಿಸಿದ್ದಾರೆ.

ರಮಾಪಕ್ಷದಲ್ಲಿಯೂ ಇದೇ ಅಭಿಪ್ರಾಯವಿರುತ್ತದೆ.

ವಿಶೇಷ :- ವಿಷ್ಣುವು ರಮೆಯ ಬಿಂಬರೂಪನಾಗಿರುವುದರಿಂದ ಅಥವಾ ಮೋಹಿನ್ಯಾದಿ ಸ್ತ್ರೀರೂಪಧಾರಿಯಾಗಿರುವುದರಿಂದ ತಾನು ತನ್ನನ್ನು ಸ್ತ್ರೀಲಿಂಗ ಶಬ್ದದಿಂದ ವೇದವಾಣಿಯ ಮೂಲಕ ವ್ಯವಹರಿಸಿದ್ದಾನೆ.

ಓಂ ಮಯಾ ಸೋ ಅನ್ನಮತ್ತಿ ಯೋ ವಿಪಶ್ಯತಿ ಯಃ ಪ್ರಾಣಿತಿ ಯ
ಈಂ ಶೃಣೋತ್ಯುಕ್ತಮ್ । ಅಮಂತವೋ ಮಾಂ ತ ಉಪ ಕ್ಷಿಯಂತಿ
ಶ್ರುಧಿ ಶ್ರುತ ಶ್ರದ್ಧಿವಂ ತೇ ವದಾಮಿ ಓಂ ॥೪॥

ಯಾವನು ಅನ್ನವನ್ನು ತಿನ್ನುತ್ತಾನೆಯೋ ಅವನು ನನ್ನ ಅನುಗ್ರಹದಿಂದಲೇ ತಿನ್ನುತ್ತಾನೆ. ಯಾವನು ನಾನಾತರಹದ ವಸ್ತುಗಳನ್ನು ನೋಡುತ್ತಾನೆಯೋ ಅವನು ನನ್ನ ಅನುಗ್ರಹದಿಂದಲೇ ನೋಡುತ್ತಾನೆ. ಯಾವನು ಚೇಷ್ಟೆಯನ್ನು ಮಾಡುತ್ತಾನೆಯೋ ಹಾಗು ಹೇಳಿದ್ದನ್ನು ಕೇಳುತ್ತಾನೆಯೋ ಆ ವ್ಯಾಪಾರಗಳೂ ನನ್ನ ಅನುಗ್ರಹದಿಂದ ಆಗುತ್ತವೆ. ಯಾರು ನಿರಪರಾಧಿಗಳೋ ಅವರು ನನ್ನ ಸಮೀಪವಾಸಿಸುವ ಭಾಗ್ಯವನ್ನು ಹೊಂದುತ್ತಾರೆ. ಹೇ ಬ್ರಹ್ಮದೇವನೆ ! ಶ್ರದ್ಧೆಯಿಂದ ಕೇಳಬೇಕಾದ ವಿಷಯವನ್ನು ನಿನಗೆ ಹೇಳುತ್ತೇನೆ. ಅದನ್ನು ಕೇಳು.

ರಮಾಪಕ್ಷದಲ್ಲಿಯೂ ಇದೇ ಅಭಿಪ್ರಾಯವಿರುತ್ತದೆ.

ಓಂ ಅಹಮೇವ ಸ್ವಯಮಿದಂ ವದಾಮಿ ಜುಷ್ಟಂ ದೇವೇಭಿರುತ ಮಾನುಷೇಭಿಃ । ಯಂ ಕಾಮಯೇ ತಂತಮುಗ್ರಂ ಕೃಣೋಮಿ ತಂ ಬ್ರಹ್ಮಾಣಂ ತಮೃಷಿಂ ತಂ ಸುಮೇಧಾಮ್ ಓಂ ॥೫॥

ದೇವತೆಗಳು ಹಾಗು ಮನುಷ್ಯರು ಹಿಂದೆ ಹೇಳಿದ ಮತ್ತು ಮುಂದೆ ಹೇಳುವ ವಿಷಯವನ್ನು ನಾನೇ ಯಾರ ಮುಖದಿಂದಲೂ ಕೇಳಿಕೊಳ್ಳದೆ ಹೇಳುತ್ತೇನೆ. ನಾನು ಯಾರನ್ನು ರುದ್ರನನ್ನಾಗಿ ಮಾಡಲು ಬಯಸುತ್ತೇನೆಯೋ ಅವನನ್ನು ರುದ್ರಪದವಿಯುಳ್ಳವನನ್ನಾಗಿ ಮಾಡುತ್ತೇನೆ. ಋಜುಜೀವರ ಮಧ್ಯದಲ್ಲಿ ಯಾರನ್ನು ಬ್ರಹ್ಮನನ್ನು ಮಾಡಲು ಬಯಸುವೆನೋ ಅವನಿಗೆ ಬ್ರಹ್ಮಪದವೀಯನ್ನೂ ಕೊಡುತ್ತೇನೆ. ಯಾರನ್ನು ಋಷಿಯನ್ನಾಗಿ ಮಾಡಲು ಇಚ್ಛಿಸುತ್ತೇನೆಯೋ ಅವನನ್ನು ಋಷಿಯನ್ನಾಗಿ ಮಾಡುತ್ತೇನೆ. ಯಾವನನ್ನು ಪ್ರಜ್ಞಾವಂತನನ್ನಾಗಿ ಮಾಡಲು ಬಯಸುವೆನೋ ಅವನನ್ನು ಪ್ರಜ್ಞಾವಂತನನ್ನಾಗಿ ಮಾಡುತ್ತೇನೆ.

ರಮಾಪಕ್ಷದಲ್ಲಿಯೂ ಇದೇ ಅಭಿಪ್ರಾಯವಿರುತ್ತದೆ.

ಓಂ ಅಹಂ ರುದ್ರಾಯ ಧನುರಾ ತನೋಮಿ ಬ್ರಹ್ಮದ್ವಿಷೇ ಶರವೇ ಹಂತವಾ ಉ । ಅಹಂ ಜನಾಯ ಸಮದಂ ಕೃಣೋಮ್ಯಹಂ ದ್ಯಾವಾಪೃಥಿವೀ ಆ ವಿವೇಶ ಓಂ ॥೬॥

ನಾನು ಸಂಹಾರಕಾಲದಲ್ಲಿ ಬ್ರಹ್ಮದ್ವೇಷಿಗಳನ್ನು ಸಂಹರಿಸುವ ರುದ್ರದೇವರನ್ನು ಸಂಹರಿಸುವುದಕ್ಕೆ ಧನುಸ್ಸನ್ನು ತೆಗೆದುಕೊಳ್ಳುತ್ತೇನೆ ನಾನು ದುರ್ಜನರನ್ನು ಮದಯುಕ್ತರನ್ನಾಗಿ ಸಜ್ಜನರನ್ನು ಹರ್ಷಯುಕ್ತರನ್ನಾಗಿ ಮಾಡುತ್ತೇನೆ. ನಾನು ದ್ಯುಲೋಕ ಹಾಗು ಭೂಲೋಕವನ್ನು ತದುಪಲಕ್ಷಿತಸರ್ವಲೋಕಗಳನ್ನು ವ್ಯಾಪಿಸಿದ್ದೇನೆ.

ರಮಾಪಕ್ಷದಲ್ಲಿಯೂ ಇದೇ ಅಭಿಪ್ರಾಯವಿರುತ್ತದೆ.

ಓಂ ಅಹಂ ಸುವೇ ಪಿತರಮಸ್ಯ ಮೂರ್ಧನ್ ಮಮ ಯೋನಿರಪ್ಸ್ವಂತಃ ಸಮುದ್ರೇ । ತತೋ ವಿ ತಿಷ್ಠೇ ಭುವನಾನು ವಿಶ್ವೋ ತಾಮೂಂ ದ್ಯಾಂ ವರ್ಷ್ಮಣೋಪ ಸ್ಪೃಶಾಮಿ ಓಂ ॥೭॥

ನಾನು ಈ ಜಗತ್ತಿನ ಸೃಷ್ಟಿಕರ್ತೃವಾದ ಬ್ರಹ್ಮದೇವರನ್ನು ಸರ್ವಾಧಿಕರನ್ನಾಗಿ ಸೃಷ್ಟಿ ಮಾಡುತ್ತೇನೆ. ನನಗೆ ಗರ್ಭಧಾರಣೆ ಮಾಡಲು ಯೋಗ್ಯಳಾದ ರಮೆಯು ಸಮುದ್ರದ

ಒಳಗೆ ನೀರಿನಲ್ಲಿ ಪ್ರಾದುರ್ಭವಿಸಿದ್ದಾಳೆ. ಲಕ್ಷ್ಮೀದೇವಿಗೂ ಒಡೆಯನಾದುದರಿಂದಲೇ ಸರ್ವಲೋಕಗಳಲ್ಲಿ ವಿಶೇಷೇಣ ಗೌರವಾರ್ಹನಾಗಿ ಇರುತ್ತೇನೆ. ಮತ್ತು ದ್ಯುಲೋಕವನ್ನು ನನ್ನ ದೇಹದಿಂದ ವ್ಯಾಪಿಸಿದ್ದೇನೆ.

ರಮಾದೇವಿಯ ಪಕ್ಷದಲ್ಲಿ - ನಾನು ಈ ಜಗತ್ತಿನ ಸೃಷ್ಟಿಕರ್ತೃವಾದ ಬ್ರಹ್ಮದೇವರನ್ನು ಸರ್ವಶ್ರೇಷ್ಠರನ್ನಾಗಿ ಸೃಷ್ಟಿಸುತ್ತೇನೆ. ನನ್ನ ಪ್ರಸವ ಶಕ್ತಿಗೆ ಕಾರಣನಾದ ಶ್ರೀಹರಿಯು ಸಮುದ್ರದ ಒಳಗೆ ನೀರಿನಲ್ಲಿ ಇರುತ್ತಾನೆ. ಆ ಶ್ರೀಹರಿಯ ಅನುಗ್ರಹಿದಿಂದಲೇ ನಾನು ಸರ್ವಲೋಕಗಳಲ್ಲಿ ಗೌರವಾರ್ಹಳಾಗಿ ಇರುತ್ತೇನೆ. ಮತ್ತು ದ್ಯುಲೋಕವನ್ನು ದೇಹದಿಂದ ವ್ಯಾಪಿಸಿದ್ದೇನೆ.

ಓಂ ಅಹಮೇವ ವಾತ ಇವ ಪ್ರವಾಮ್ಯಾರಭಮಾಣಾ ಭುವನಾನಿ
ವಿಶ್ವಾ। ಪರೋ ದಿವಾ ಪರ ಏನಾ ಪೃಥಿವ್ಯೈ ತಾವತೀ ಮಹಿನಾ
ಸಂ ಬಭೂವ ಓಂ ॥೮॥

ನಾನೇ ವಾಯುವಿನಂತೆ ಎಲ್ಲ ಕಡೆ ಸಂಚರಿಸುತ್ತೇನೆ. ನಾನೇ ಎಲ್ಲ ಜಗತ್ತನ್ನೂ ಸೃಷ್ಟಿಸುವವನು. ದ್ಯುಲೋಕವನ್ನು ದಾಟಿ ಇದ್ದವನು. ಈ ಪೃಥಿವೀಯನ್ನು ಪರಿಮಾಣವಿಷಯದಲ್ಲಿ ಮೀರಿದವನು. ಮಹಿಮೆಯಿಂದ ಇಷ್ಟೇ ಇರುವನೇ ? ಇಲ್ಲ. ಇದಕ್ಕೂ ಅಧಿಕಮಹಿಮೆಯುಳ್ಳವನು ನಾನು.

ರಮಾದೇವಿಯ ಪಕ್ಷದಲ್ಲಿ - ನಾನು ವಾಯುವಿನಂತೆ ಎಲ್ಲ ಪ್ರದೇಶಗಳಲ್ಲಿ ಇರುತ್ತೇನೆ. ನಾನೇ ಎಲ್ಲ ಜಗತ್ತನ್ನು ಸೃಷ್ಟಿಸುವವಳು. ನನ್ನ ಪತಿಯು ದ್ಯುಲೋಕವನ್ನು ಮೀರಿ ಇದ್ದಾನೆ. ಪರಿಮಾಣದಿಂದ ಪೃಥಿವೀಯನ್ನು ಮೀರಿ ಇರುತ್ತಾನೆ. ನಾನು ಮಾತ್ರ ಭಗವದಪೇಕ್ಷಯಾ ಸೀಮಿತಮಹಿಮೆಯುಳ್ಳವಳು.

ಇಲ್ಲಿಗೆ ಅಂಭೃಣೀಸೂಕ್ತವ್ಯಾಖ್ಯಾನವು ಮುಗಿಯಿತು.

## ೩೪. ಏಕಾಕ್ಷರ ಲಕ್ಷ್ಮೀಮಂತ್ರ

॥ ಓಂ ಹ್ರೀಂ ಓಂ ॥

''ನಮಃ'' ಶಬ್ದವನ್ನು ಅಧ್ಯಾಹಾರ ಮಾಡಬೇಕು. ಹೀಗೆಯೇ ''ನಮಃ'' ಶಬ್ದವಿಲ್ಲದಿದ್ದ ಎಲ್ಲ ಸ್ಥಳದಲ್ಲೂ ''ನಮಃ'' ಶಬ್ದವನ್ನು ಸೇರಿಸಿ ಅರ್ಥೈಸಬೇಕು.

ವಿಷ್ಣುವಿಷಯದಲ್ಲಿ ಹಂಸಮಂತ್ರವ್ಯಾಖ್ಯಾನ ಸಮಯದಲ್ಲಿ ಹೇಳಿದ ಅರ್ಥವನ್ನೇ ''ಹ್ರೀಂ''ಶಬ್ದಕ್ಕೆ ಹೇಳಬೇಕು.

ಲಕ್ಷ್ಮೀಪಕ್ಷದಲ್ಲಿ - ಭಕ್ತರ ದಾರಿದ್ರ್ಯವನ್ನು ಹರಣ ಮಾಡುವುದರಿಂದ ಅಥವಾ ತನ್ನ ಪತಿಯಾದ ಶ್ರೀಹರಿಯ ಎದುರಿಗೆ ನಾಚಿಕೆಯುಳ್ಳವಳಾದುದರಿಂದ "ಹ್ರೀಂ" ಶಬ್ದವಾಚ್ಯಳಾದ ಲಕ್ಷ್ಮೀದೇವಿಗೆ ನಮಃ ಎಂಬ ಅಭಿಪ್ರಾಯ.

ಹೀಗೆಯೇ ಮುಂದಿನ ಎಲ್ಲ ಮಂತ್ರಗಳನ್ನು ವಿಷ್ಣು ಹಾಗು ಆ ಮಂತ್ರಪ್ರತಿಪಾದ್ಯ ದೇವತಾಪರವಾಗಿ ತಿಳಿಯಬೇಕು.

## ೩೫. ಏಕಾಕ್ಷರ ಶ್ರೀ ಮಂತ್ರ

॥ ಓಂ ಶ್ರೀಂ ಓಂ ॥

ಲಕ್ಷ್ಮೀದೇವಿಯಲ್ಲಿ ಗರ್ಭಾಧಾನಮಾಡಿ ಸರ್ವವನ್ನು ಸೃಷ್ಟಿಸುವ ಲಕ್ಷ್ಮೀದೇವಿಯನ್ನು ಚೆನ್ನಾಗಿ ಅರಿತಿರುವ ಭಗವಂತನಿಗೆ ನಮಃ.

ಲಕ್ಷ್ಮೀಪಕ್ಷದಲ್ಲಿ - ಶ್ರೀಹರಿಯ ವಕ್ಷಸ್ಥಲವನ್ನು ಆಶ್ರಯಿಸಿದ ಲಕ್ಷ್ಮೀದೇವಿಗೆ ನಮಃ

## ೩೬. ಏಕಾಕ್ಷರ ಭೂನಾಮಕಲಕ್ಷ್ಮೀಮಂತ್ರ

॥ ಓಂ ಭೂಂ ಓಂ ॥

ಪೃಥಿವಿಯನ್ನು ಮುಖ್ಯತಃ ತದಭಿಮಾನಿ ಭೂನಾಮಕ ಲಕ್ಷ್ಮೀದೇವಿಯನ್ನು ರಕ್ಷಿಸುವವನು, ಜನ್ಯವಾದ ಸರ್ವಪ್ರಪಂಚವನ್ನು ರಕ್ಷಿಸುವವನು ಆದ ವಿಷ್ಣುವಿಗೆ ನಮಃ.

ರಮಾಪಕ್ಷದಲ್ಲಿ - ಜಗತ್ತಿನ ಸೃಷ್ಟಿಗೆ ಕಾರಣಳಾದ ಲಕ್ಷ್ಮೀದೇವಿಗೆ ನಮಃ

## ೩೭. ಪಂಚಾಕ್ಷರ ಭೂನಾಮಕಲಕ್ಷ್ಮೀಮಂತ್ರ

॥ ಓಂ ಭೂಂ ಭುವೇ ನಮಃ ಓಂ ॥

ಭೂನಾಮಕ ಲಕ್ಷ್ಮೀದೇವಿಯನ್ನು ರಕ್ಷಿಸುವ ಪೂರ್ಣನಾದ ಸ್ಫೂರ್ತಿಸ್ವರೂಪನಾದ ಶ್ರೀಹರಿಗೆ ನಮಃ. ಅಥವಾ ಜಗತ್ತಿನ ಸೃಷ್ಟಿಗೆ ಕಾರಣರಾದ ಬ್ರಹ್ಮದೇವರು, ರುದ್ರದೇವರು ಇವರಿಗೆ ಆಧಾರನಾದ ವಿಷ್ಣುವಿಗೆ ನಮಃ. 'ಭೂಂ' ಎಂಬ ಬೀಜಾಕ್ಷರವು ಅವ್ಯಯವಾಗಿರುವುದರಿಂದ ಪ್ರಕೃತದಲ್ಲಿ ಷಷ್ಠ್ಯರ್ಥದಲ್ಲಿ ವಿವಕ್ಷಿಸಿದ್ದಾರೆ.

ರಮಾಪಕ್ಷದಲ್ಲಿ - ಭೂಂ ಎಂಬ ಬೀಜಾಕ್ಷರದಲ್ಲಿ ಭೂ ಉ ಮ ಎಂಬ ಮೂರು ಅಕ್ಷರಗಳಿವೆ. ಭೂಃ ಎಂದರೆ 'ಅನಿರ್ವಿಣ್ಣಃಸ್ಥವಿಷ್ಠೋ ಭೂಃ' ಎಂಬ ವಿಷ್ಣುಸಹಸ್ರನಾಮ ವಚನಾನುಸಾರೇಣ ವಿಷ್ಣುವು. ಉ ಎಂದರೆ ಹಿಂದೆ ಹೇಳಿದಂತೆ ರುದ್ರದೇವರು. ಮ ಎಂದರೆ 'ಮಶ್ಶಿವಶ್ಚಂದ್ರಮಾ ವೇಧಾಃ' ಎಂಬ ಕೋಶಾನುಸಾರೇಣ ಬ್ರಹ್ಮದೇವರು. ಈ

ಮೂವರ ಅಭಿವ್ಯಕ್ತಿ ಸ್ಥಾನಳಾದ ರಮಾದೇವಿಗೆ ನಮಃ. ರಮೆಯು ಬ್ರಹ್ಮ ವಿಷ್ಣು ಮಹೇಶ್ವರರ ಅಭಿವ್ಯಕ್ತಿ ಸ್ಥಾನವೆಂದು ಶ್ರೀಮದಾಚಾರ್ಯರು ತಾತ್ಪರ್ಯನಿರ್ಣಯದಲ್ಲಿ

"ಸತ್ತ್ವಾತ್ಮಿಕಾಯಾಂ ಸ ಬಭೂವ ತಸ್ಮಾದ್ ಸ ವಿಷ್ಣುನಾಮ್ನೈವ ನಿರಂತೋಽಪಿ ।
ರಜಸ್ತನೌ ಚೈವ ವಿರಿಂಚ ಆಸೀತ್ ತಮಸ್ತನೌ ಶರ್ವ ಇತಿ ತ್ರಯೋಽಸ್ಮಾತ್" ॥

ಎಂಬುದಾಗಿ ತಿಳಿಸಿದ್ದಾರೆ.

ಅಥವಾ 'ಭೂಂ' ಎಂಬ ಜಪದಿಂದ ಭಕ್ತರಿಗೆ ಆವಿರ್ಭವಿಸಿ ಬರುವವಳಾದ ರಮಾದೇವಿಗೆ ನಮಃ ಎಂಬ ಅಭಿಪ್ರಾಯ.

## ೩೮. ಏಕಾಕ್ಷರ ದುರ್ಗಾನಾಮಕ ಲಕ್ಷ್ಮೀಮಂತ್ರ

॥ ಓಂ ದುಃ ಓಂ ॥

ದೈತ್ಯರನ್ನು ದುಃಖಗೊಳಿಸುವ ಹಾಗು ಅಧರ್ಮ ನಿಷೇಧಕನಾದ ವಿಷ್ಣುವಿಗೆ ನಮಃ.

ರಮಾಪಕ್ಷದಲ್ಲಿ - ಭಗವದಾಜ್ಞೆಯಿಂದ ತದಧೀನಳಾಗಿ ದೈತ್ಯರನ್ನು ದುಃಖಗೊಳಿಸುವ ಅಧರ್ಮನಿಷೇಧಕಳಾದ ರಮಾದೇವಿಗೆ ನಮಃ

## ೩೯. ಷಡಕ್ಷರ ದುರ್ಗಾನಾಮಕ ಲಕ್ಷ್ಮೀಮಂತ್ರ

॥ ಓಂ ದುಃ ದುರ್ಗಾಯೈ ನಮಃ ಓಂ ॥

'ದುಃ ದುಃಖೇ ಚ ನಿಷೇಧೇ ಚ' ಎಂಬ ಅನುಶಾಸನಾನುಸಾರೇಣ ದುಃಖವನ್ನು ಎಂದಿಗೂ ಹೊಂದದಿರುವದರಿಂದ 'ದುಃ ದುರ್ಗಾ' ಎಂಬ ಶಬ್ದವಾಚ್ಯನಾದ ಅಥವಾ 'ದುಃ' ಎಂಬ ಬೀಜಾಕ್ಷರದಿಂದ ವಾಚ್ಯಳಾದ ದುರ್ಗಾನಾಮಕಳಾದ ಲಕ್ಷ್ಮೀದೇವಿಗೂ ಸಾಕಲ್ಯೇನ ತಿಳಿಯಲು ಅಶಕ್ಯನಾದ ವಿಷ್ಣುವಿಗೆ ನಮಃ.

ರಮಾಪಕ್ಷದಲ್ಲಿ - ದುಃಖವನ್ನು ಹೊಂದದಿರುವ ಹಾಗೂ ದುಷ್ಟರಿಂದ ಅಗಮ್ಯಳಾದ ದುರ್ಗಾನಾಮಕ ಲಕ್ಷ್ಮೀದೇವಿಗೆ ನಮಃ.

## ೪೦. ದುರ್ಗಾನಾಮಕ ಲಕ್ಷ್ಮೀ ವೈದಿಕಮಂತ್ರ

ಓಂ ಜಾತವೇದಸೇ ಸುನವಾಮ ಸೋಮಮರಾತೀಯತೋ ನಿ ದಹಾತಿ ವೇದಃ । ಸ ನಃ ಪರ್ಷದತಿ ದುರ್ಗಾಣಿ ವಿಶ್ವಾ ನಾವೇವ ಸಿಂಧುಂ ದುರಿತಾತ್ಯಗ್ನಿಃ ಓಂ ॥

ನಾವು ಮಹೈಶ್ವರ್ಯವನ್ನು ಹೊಂದಿದ ಆದ್ದರಿಂದ ಭಕ್ತರಿಗೂ ಅವರವರ ಯೋಗ್ಯತೆಗೆ ಅನುಗುಣವಾಗಿ ಐಶ್ವರ್ಯಪ್ರದನಾದ ಅಗ್ನ್ಯಂತರ್ಗತ ಪರಶುರಾಮನಿಗೆ ಸೋಮರಸವನ್ನು ಅಭಿಷವಣ ಮಾಡುತ್ತೇವೆ. (ಸಮರ್ಪಿಸುತೇವೆ) ಸರ್ವವನ್ನು ಅರಿತ ಸರ್ವವೇದಪ್ರತಿಪಾದ್ಯನಾದ ಪರಶುರಾಮನು ಶತ್ರುಗಳಾದ ಕಾಮಾದಿಗಳನ್ನು ನಿಶ್ಶೇಷವಾಗಿ ನಾಶಮಾಡುತ್ತಾನೆ. ಸ್ವತಃ ಗಮನಾದಿಪ್ರವೃತ್ತಿಯಲ್ಲಿ ಅಸಮರ್ಥವಾದ ಪ್ರಪಂಚವನ್ನು ಪ್ರವೃತ್ತಗೊಳಿಸುವ ಆ ಅಗ್ನ್ಯಂತರ್ಗತ ಪರಶುರಾಮದೇವರು ಬೇರೆಯವರಿಂದ ಅಪರಿಹಾರ್ಯವಾದ ನಮ್ಮ ಸರ್ವದುರಿತಗಳನ್ನು ನೌಕೆಯಿಂದ ಸಾಗರವನ್ನು ದಾಟಿಸುವಂತೆ ನೌಕಾಸ್ಥಾನೀಯ ತನ್ನ ಕೃಪಾದೃಷ್ಟಿಯಿಂದ ದೂರಮಾಡಲಿ.

ರಮಾಪಕ್ಷದಲ್ಲಿ - ಯಾವ ಅಗ್ನ್ಯಂತರ್ಗತ ಪರಶುರಾಮನು ಅಪರಿಹಾರ್ಯವಾದ ಎಲ್ಲ ದುರಿತಗಳನ್ನು ನೌಕೆಯಿಂದ ಸಾಗರವನ್ನು ದಾಟಿಸುವುವಂತೆ ದಾಟಿಸುತ್ತಾನೆಯೋ ಅಂತಹ ಪರಶುರಾಮನಿಗೆ ಸೋಮರಸವನ್ನು ಸಮರ್ಪಿಸುತ್ತೇವೆ. ಪುರುಷರಂತೆ ಸಾಮರ್ಥ್ಯವುಳ್ಳವಳಾಗಿರುವುದರಿಂದ 'ಯಃ' ಎಂಬ ಪುಲ್ಲಿಂಗ ಯಚ್ಛಬ್ದದಿಂದ ವಾಚ್ಯಳಾದ ಯಾವ ಲಕ್ಷ್ಮೀದೇವಿಯು ಆ ಭಗವಂತನ ಸೇವೆಯಲ್ಲಿ ವಿಘ್ನವನ್ನು ತಂದುಕೊಡುವ ಶತ್ರುಗಳನ್ನು ಸಂಪೂರ್ಣನಾಶಮಾಡುತ್ತಾಳೆಯೋ ಅವಳೇ 'ವೇದಾಭಿಮಾನಿನೀ ದುರ್ಗಾ' ಎಂಬ ಪ್ರಮಾಣಾನುಸಾರೇಣ ವೇದಾಭಿಮಾನಿತ್ವೇನ ವೇದಶಬ್ದವಾಚ್ಯಳಾದ ದುರ್ಗಾದೇವಿಯು.

### ೪೧. ಹಿರಣ್ಯಗರ್ಭಸೂಕ್ತ ಮಂತ್ರ

ಓಂ ಹಿರಣ್ಯಗರ್ಭಃ ಸಮವರ್ತತಾಗ್ರೇ ಭೂತಸ್ಯ ಜಾತಃ ಪತಿರೇಕ ಆಸೀತ್ । ಸ ದಾಧಾರ ಪೃಥಿವೀಂ ದ್ಯಾಮುತೇಮಾಂ ಕಸ್ಮೈ ದೇವಾಯ ಹವಿಷಾ ವಿಧೇಮ ಓಂ ॥೧॥

"ತಸ್ಮೈ ನಮಃ" ಎಂಬ ಪದಗಳನ್ನು ಸರ್ವತ್ರ ಅಧ್ಯಾಹರ ಮಾಡಬೇಕು. ಪರಮಾತ್ಮನು ಸೃಷ್ಟಿಪೂರ್ವದಲ್ಲಿ ಪ್ರಲಯಕಾಲದಲ್ಲಿ ಬ್ರಹ್ಮಾಂಡವನ್ನು ಉದರದಲ್ಲಿ ಇಟ್ಟುಕೊಂಡವನಾಗಿ ಪ್ರಲಯಜಲಧಿಯ ಮೇಲೆ ಇದ್ದನು. ಅವನೊಬ್ಬನೇ ಉತ್ಪನ್ನವಾದ ಈ ಜಗತ್ತಿನ ಮುಖ್ಯಪಾಲಕನು. ಆ ವಿಷ್ಣುವು ಪ್ರತ್ಯಕ್ಷಸಿದ್ಧ ಪೃಥಿವ್ಯುಪಲಕ್ಷಿತ ಅಧೋಲೋಕಗಳನ್ನು ದ್ಯುಪದೋಪಲಕ್ಷಿತ ಊರ್ಧ್ವಲೋಕಗಳನ್ನು ಧಾರಣ ಮಾಡಿದ್ದಾನೆ. ಆದ್ದರಿಂದ ವಿಶ್ವಸರ್ಜನಾದಿರೂಪಕ್ರೀಡಾಗುಣವಿಶಿಷ್ಟನಾದ ಸುಖಸ್ವರೂಪಿಯಾದ ವಿಷ್ಣುವಿಗೆ ಉಪಾಸನಾರೂಪವಾದ ಹವಿಸ್ಸನ್ನು ಸಮರ್ಪಿಸುತ್ತಾ ಅವನನ್ನು ಅನುಗ್ರಹೋನ್ಮುಖನನ್ನಾಗಿ ಮಾಡುತ್ತೇವೆ. ಆ ವಿಷ್ಣುವಿಗೆ ನಮಃ.

ಬ್ರಹ್ಮದೇವರ ಪಕ್ಷದಲ್ಲಿ - ಬ್ರಹ್ಮದೇವರು ವಿಷ್ಣುವಿನಿಂದ ಪ್ರಪ್ರಥಮವಾಗಿ ಜನಿಸಿ ಮಹತ್ತತ್ತ್ವಾತ್ಮಕ ದೇಹವುಳ್ಳವರಾದರು. ಹುಟ್ಟಿದ ಬ್ರಹ್ಮದೇವರಿಗೆ ಸರ್ವಲೋಕಧಾರಕ-ನಾದ ಆ ವಿಷ್ಣು ಒಬ್ಬನೇ ಮುಖ್ಯಸ್ವಾಮಿಯು. ಅಂತಹ ಬ್ರಹ್ಮದೇವರಿಗೆ ಹವಿಸ್ಸನ್ನು ಸಮರ್ಪಿಸುತ್ತಾ ಅವರನ್ನು ಅನುಗ್ರಹೋನ್ಮುಖರನ್ನಾಗಿ ಮಾಡುತ್ತೇವೆ. ಅಂತಹ ಬ್ರಹ್ಮದೇವರಿಗೆ ನಮಃ

ವಿಶೇಷ :- ಈ ಮಂತ್ರದಲ್ಲಿ ವಿಷ್ಣು ಹಾಗು ಚತುರ್ಮುಖಬ್ರಹ್ಮವಾಚಕ ವಾದ 'ಕ' ಶಬ್ದವು ವಸ್ತುತಃ ಸರ್ವನಾಮಸಂಜ್ಞಾವುಳ್ಳದ್ದಾಗದಿದ್ದರೂ "ಸರ್ವೇ ವಿಧಯಶ್ಛಂದಸಿ ಬಹುಲಂ ಭವಂತಿ' ಎಂಬ ವ್ಯಾಕರಣನಿಯಮಾನುಸಾರೇಣ ಸರ್ವನಾಮಸಂಜ್ಞಾವುಳ್ಳ-ದ್ದಾಗಿರುತ್ತದೆ. ಅತ ಏವ 'ಙೇ' ಎಂಬ ಚತುರ್ಥೀವಿಭಕ್ತಿ ಪ್ರತ್ಯಯಕ್ಕೆ 'ಸ್ಮೈ' ಎಂಬುವುದು ಆದೇಶವಾಗಿ 'ಕಸ್ಮೈ' ಎಂಬ ರೂಪವು ಸಿದ್ಧವಾಗಿರುತ್ತದೆ.

ಓಂ ಯ ಆತ್ಮದಾ ಬಲದಾ ಯಸ್ಯ ವಿಶ್ವ ಉಪಾಸತೇ ಪ್ರಶಿಷಂ ಯಸ್ಯ
ದೇವಾಃ । ಯಸ್ಯ ಛಾಯಾಽಮೃತಂ ಯಸ್ಯ ಮೃತ್ಯುಃ ಕಸ್ಮೈ
ದೇವಾಯ ಹವಿಷಾ ವಿಧೇಮ ಓಂ ॥೨॥

ವಿಷ್ಣು ಹಾಗು ಬ್ರಹ್ಮದೇವರು ಜ್ಞಾನಶಕ್ತಿಪ್ರದರು. ಸರ್ವದೇವತೆಗಳು ಅವರಿಂದ ಅನುಗ್ರಹರೂಪವಾದ ಫಲವನ್ನು ಬಯಸುತ್ತಾರೆ ಅವರನ್ನು ಉಪಾಸಿಸುತ್ತಾರೆ. ಅವರ ಛಾಯೆಯು(ನೆರಳು) ದೇವತೆಗಳಿಗೆ ಅಮೃತದಂತೆ ಸುಖಪ್ರದವು, ಅಸುರರಿಗೆ ಮೃತ್ಯುವಾಗಿದೆ. ಅಂತಹ ವಿಷ್ಣು ಹಾಗು ಬ್ರಹ್ಮದೇವರಿಗೆ ಹವಿಸ್ಸನ್ನು ಸಮರ್ಪಿಸುತ್ತಾ ಅವರನ್ನು ಸ್ವಾನುಕೂಲರನ್ನಾಗಿ ಮಾಡುತ್ತೇವೆ. ಆ ವಿಷ್ಣುಬ್ರಹ್ಮರಿಗೆ ನಮಃ

ಓಂ ಯಃ ಪ್ರಾಣತೋ ನಿಮಿಷತೋ ಮಹಿತ್ವೈಕ ಇಂದ್ರಾಜಾ
ಜಗತೋ ಬಭೂವ । ಯ ಈಶೇ ಅಸ್ಯ ದ್ವಿಪದಶ್ಚತುಷ್ಪದಃ ಕಸ್ಮೈ
ದೇವಾಯ ಹವಿಷಾ ವಿಧೇಮ ಓಂ ॥೩॥

ಭಗವಂತನು ಚೇತನಾಚೇತನಾತ್ಮಕ ಜಗತ್ತಿಗೆ ತನ್ನ ಮಹಿಮೆಯಿಂದ ಮುಖ್ಯಸ್ವಾಮಿ. ಅವನು ಮನುಷ್ಯರನ್ನು ಗವಾದಿ ಪಶುಗಳನ್ನು ನಿಯಮನ ಮಾಡಲು ಸಮರ್ಥನು. ಅಂತಹ ವಿಷ್ಣುವಿಗೆ ಹವಿಸ್ಸನ್ನು ಸಮರ್ಪಿಸುತ್ತಾ ಅವನನ್ನು ಅನುಗ್ರಹೋನ್ಮುಖನನ್ನಾಗಿ ಮಾಡುತ್ತೇವೆ. ಆ ವಿಷ್ಣುವಿಗೆ ನಮಃ

ಬ್ರಹ್ಮ ಪಕ್ಷದಲ್ಲಿ - ಯಾವ ಬ್ರಹ್ಮದೇವರು ಸರ್ವಚೇಷ್ಟಕನಾದ ವಿಷ್ಣುವಿನ ಅನುಗ್ರಹದಿಂದ ಪ್ರಾಪ್ತವಾದ ಸಾಮರ್ಥ್ಯದಿಂದ ವಿಷ್ಣುವಿನ ಭ್ರೂಭಂಗಮಾತ್ರದಿಂದ ಸೃಷ್ಟಿಯನ್ನು ಹೊಂದುವ ಜಗತ್ತಿಗೆ ರುದ್ರಾದ್ಯಪೇಕ್ಷಯಾ ಮುಖ್ಯ ಪಾಲಕರು ಹಾಗೂ ನಿಯಾಮಕರೂ ಅಂತಹ ಬ್ರಹ್ಮದೇವರಿಗೆ ಹವಿಸ್ಸನ್ನು ಸಮರ್ಪಿಸುತ್ತಾ ಅವರನ್ನು ಅನುಗ್ರಹೋನ್ಮುಖರನ್ನಾಗಿ ಮಾಡುತ್ತೇವೆ. ಅಂತಹ ಬ್ರಹ್ಮದೇವರಿಗೆ ನಮಃ

ಓಂ ಯಸ್ಯೇಮೇ ಹಿಮವಂತೋ ಮಹಿತ್ವಾ ಯಸ್ಯ ಸಮುದ್ರಂ
ರಸಯಾ ಸಹಾಹುಃ । ಯಸ್ಯೇಮಾಃ ಪ್ರದಿಶೋ ಯಸ್ಯ ಬಾಹೂ
ಕಸ್ಮೈ ದೇವಾಯ ಹವಿಷಾ ವಿಧೇಮ ಓಂ ॥೪॥

ಈ ಹಿಮಾಲಯವೇ ಮೊದಲಾದ ಪರ್ವತಗಳು ವಿಷ್ಣು ಹಾಗು ಬ್ರಹ್ಮದೇವರ ವಶದಲ್ಲಿವೆ. ಅವರ ಸಾಮರ್ಥ್ಯದಿಂದ ಭೂಮಿಯನ್ನು ಸಮುದ್ರವನ್ನು ಅಂತರಿಕ್ಷಲೋಕ-ವನ್ನು ಅವರ ಅಧೀನವೆಂದು ಜ್ಞಾನಿಗಳು ಹೇಳುತ್ತಾರೆ. ಎಲ್ಲ ದಿಕ್ಕುಗಳು ಅವರ ಅಧೀನದಲ್ಲಿವೆ. ಅವರ ದಕ್ಷಿಣವಾಮಬಾಹುಗಳಿಂದ ಇಂದ್ರಾದಿದೇವತೆಗಳು ಹಾಗು ರಾಜರು ಜನಿಸಿ ವಶದಲ್ಲಿರುವರು. ಅಂತಹ ವಿಷ್ಣು ಬ್ರಹ್ಮರಿಗೆ ನಮಃ.

ಓಂ ಯೇನ ದ್ಯೌರುಗ್ರಾ ಪೃಥಿವೀ ಚ ದೃಳ್ಹಾ ಯೇನ ಸ್ವಃ ಸ್ತಭಿತಂ
ಯೇನ ನಾಕಃ । ಯೋ ಅಂತರಿಕ್ಷೇ ರಜಸೋ ವಿಮಾನಃ ಕಸ್ಮೈ
ದೇವಾಯ ಹವಿಷಾ ವಿಧೇಮ ಓಂ ॥೫॥

ವಿಷ್ಣುವು ಬ್ರಹ್ಮಾಂಡಖರ್ಪರವನ್ನು ಬೀಳದಂತೆ ಮೇಲೆ ಧರಿಸಿದ್ದಾನೆ. ಅವನು ಪೃಥಿವೀಯನ್ನು ಅಭೇದ್ಯವನ್ನಾಗಿ ಮಾಡಿದ್ದಾನೆ. ಸ್ವರ್ಗವನ್ನು ಅಂತರಿಕ್ಷಲೋಕದಲ್ಲಿ ಸ್ತಂಭನಮಾಡಿದ್ದಾನೆ. ದುಃಖಲೇಪವೂ ಇಲ್ಲದ ವೈಕುಂಠಲೋಕವನ್ನು ಸ್ತಂಭನಮಾಡಿದ್ದಾನೆ. ಯಾವನು ಪಾರ್ಥಿವಕಣಗಳಿಗಿಂತಲೂ ಎಣಿಸಲಾಗದ ರೂಪಗುಣಗಳುಳ್ಳವನಾಗಿದ್ದಾನೆ. ಅಂತಹ ವಿಷ್ಣುವಿಗೆ ನಮಃ.

ಬ್ರಹ್ಮಪಕ್ಷದಲ್ಲಿ - ಬ್ರಹ್ಮದೇವರು ಲಕ್ಷ್ಮೀನಾರಾಯಣರ ಅಧೀನರಾಗಿ ಬ್ರಹ್ಮಾಂಡ-ಖರ್ಪರವನ್ನು ಬೀಳದಂತೆ ಮೇಲೆ ಧರಿಸಿದ್ದಾರೆ. ಅವರು ಪೃಥಿವೀಯನ್ನು ಅಭೇದ್ಯವನ್ನಾಗಿ ಮಾಡಿದ್ದಾರೆ. ಸ್ವರ್ಗವನ್ನು ಅಂತರಿಕ್ಷದಲ್ಲಿ ಸ್ತಂಭನಮಾಡಿದ್ದಾರೆ. ಪಾರ್ಥಿವ ಕಣಗಳಿಗಿಂತಲೂ ಎಣಿಸಲಾಗದ ಗುಣಗಳುಳ್ಳವರು ಹಾಗು ಸತ್ಯಲೋಕವನ್ನು ಸ್ವಾಧೀನದಲ್ಲಿ ಇಟ್ಟುಕೊಂಡವರು. ರಜೋಗುಣಾಭಿಮಾನರಹಿತರಾದ ಅಂತಹ ಬ್ರಹ್ಮದೇವರಿಗೆ ನಮಃ.

ಓಂ ಯಂ ಕ್ರಂದಸೀ ಅವಸಾ ತಸ್ತಭಾನೇ ಅಭ್ಯೈಕ್ಷೇತಾಂ ಮನಸಾ
ರೇಜಮಾನೇ । ಯತ್ರಾಧಿ ಸೂರ ಉದಿತೋ ವಿಭಾತಿ ಕಸ್ಮೈ
ದೇವಾಯ ಹವಿಷಾ ವಿಧೇಮ ಓಂ ॥೬॥

ಮಧುಕೈಟಭರು ತಮ್ಮ ರಕ್ಷಣೆಗೆ ಕಾರಣೀಭೂತರಾದವರಿಂದ ಅತ್ಯಂತ ಗರ್ವಿತರಾಗಿ ಅತಿದುಃಖವುಳ್ಳವರಾದರು. ಜಯವಿಜಯರು ಜ್ಞಾನದಿಂದ ಶ್ರೀಹರಿಯನ್ನು ಶರಣುಹೋದವರಾಗಿ ಪ್ರತ್ಯಕ್ಷಮಾಡಿಕೊಂಡವರು. ಅಥವಾ ಸರ್ವತ್ರ ಜಯವಿಜಯರನ್ನೇ ಕರ್ತೃಗಳನ್ನಾಗಿ ವಿವಕ್ಷಿಸಿದಾಗ ಜಯವಿಜಯರು 'ನೀವು ಮೂರು ಜನ್ಮಗಳಲ್ಲಿ ಅಸುರ ಜನ್ಮದಲ್ಲಿ ಜನಿಸಿರಿ' ಎಂಬ ಸನಕಾದಿಗಳ ಶಾಪವನ್ನು ಪಡೆದ ನಂತರ ಪ್ರಥಮಜನ್ಮದಲ್ಲಿ ಹಿರಣ್ಯಕಶಿಪು ಹಿರಣ್ಯಾಕ್ಷರಾಗಿ ಜನಿಸಿದಾಗ ಮೃತಿಕಾಲದಲ್ಲಿ ಯಾವ ಶ್ರೀಹರಿಯನ್ನು ನೋಡಿ ಭಯಾನಕವಾದ 'ಭೂತ'ವೆಂದು ತಿಳಿದು ಆಕ್ರಂದನ ಮಾಡಿದರು. ಅವರೇ ದ್ವಿತೀಯಜನ್ಮದಲ್ಲಿ ರಾವಣ ಕುಂಭಕರ್ಣರಾಗಿ ಜನಿಸಿ ಗರ್ವಿತರಾಗಿ ಮೃತಿಕಾಲದಲ್ಲಿ ಶ್ರೀಹರಿಯನ್ನು ರಾಜನೆಂದು ತಿಳಿದು, ತೃತೀಯಜನ್ಮದಲ್ಲಿ ಶಿಶುಪಾಲದಂತವಕ್ರರಾಗಿ ಜನಿಸಿ ಮೃತಿಕಾಲದಲ್ಲಿ ಸಮೀಚೀನಜ್ಞಾವುಳ್ಳವರಾಗಿ ಶ್ರೀಹರಿಯನ್ನು ಶಂಖಚಕ್ರಾದಿಚಿಹ್ನವುಳ್ಳವನನ್ನಾಗಿ ಕಂಡರು ಎಂಬ ಅಭಿಪ್ರಾಯವನ್ನೂ ಹೇಳಲು ಬರುತ್ತದೆ.

ಅಂತಹ ವಿಷ್ಣುವಿನ ಪ್ರಕಾಶವನ್ನು ಅವಲಂಬಿಸಿ ಸೂರ್ಯನು ಉದಯಿಸಿ ಪ್ರಕಾಶಮಾನನಾಗುತ್ತಾನೆ. ಅಂತಹ ಶ್ರೀಹರಿಗೆ ನಮಃ

ಬ್ರಹ್ಮಪಕ್ಷದಲ್ಲಿ - ಆಕ್ರೋಶಯುಕ್ತರಾದ ಸಂಸಾರದುಃಖದಿಂದ ಮೋಚನೆಯನ್ನು ಬಯಸಿದ ಇಂದ್ರ ಹಾಗು ವಿರೋಚನರು ಬ್ರಹ್ಮದೇವರನ್ನು ಹೊಂದಿದರು. ಅವರಿಬ್ಬರು ತಮ್ಮ ದಾಕ್ಷಿಣ್ಯರಕ್ಷಣದಿಂದ "ಯ ಏಷೋಽಂತರಕ್ಷಿಣಿ ಪುರುಷೋ ದೃಶ್ಯತೇ ಸ ಆತ್ಮಾ" ಎಂಬ ಸಮಾನೋಪದೇಶದಿಂದ ಗರ್ವಿತರಾಗಿ ಮನಸಾ ವಿಚಾರಿಸಿ ತಮಗೆ ಯೋಗ್ಯವಾದ ಅರ್ಥವನ್ನು ಕಂಡುಕೊಂಡರು. ಅವರಿಬ್ಬರ ಮಧ್ಯದಲ್ಲಿ ವಿರೋಚನನು 'ಸೂರ್ಯನು ಅಧಿಕವಾಗಿ ಭಾಸಮಾನನಾಗುತ್ತಾನೆ' ಎಂದು, ಇಂದ್ರದೇವರು 'ವಿಷ್ಣುವು ಮಹೋತ್ಕರ್ಷವುಳ್ಳವನಾಗಿ ಭಾಸಮಾನನು' ಎಂದು ತಿಳಿದರು. ಅಂತಹ ಉಪದೇಶಕರಾದ ಬ್ರಹ್ಮದೇವರಿಗೆ ನಮಃ

ಓಂ ಆಪೋ ಹ ಯದ್ಬೃಹತೀರ್ವಿಶ್ವಮಾಯನ್ ಗರ್ಭಂ ದಧಾನಾ
ಜನಯಂತೀರಗ್ನಿಂ । ತತೋ ದೇವಾನಾಂ ಸಮವರ್ತತಾಸುರೇಕಃ
ಕಸ್ಮೈ ದೇವಾಯ ಹವಿಷಾ ವಿಧೇಮ ಓಂ ॥೭॥

ಅವ್ಯಾಕೃತೋದಕಾಭಿಮಾನಿಗಳಾದ ಲಕ್ಷ್ಮೀದೇವಿಯ ಜಯಾ, ಕೃತಿ, ಶಾಂತಿ ಇತ್ಯಾದಿರೂಪಗಳು ಗರ್ಭವನ್ನು ಧರಿಸಿದವುಗಳಾಗಿ ಅಗ್ರಗಣ್ಯರಾದ ವಾಯುದೇವರನ್ನು ಹುಟ್ಟಿಸುವುದಕ್ಕಾಗಿ ವಿಷ್ಣುವನ್ನು ಸಮೀಪಿಸಿದವು. ಆ ಗರ್ಭದಿಂದ ದೇವಶ್ರೇಷ್ಠರಾದ ಪ್ರಾಣದೇವರು ಜನಿಸಿದರು. ಅಂತಹ ವಿಷ್ಣುವಿಗೆ ನಮಃ

ಬ್ರಹ್ಮಪಕ್ಷದಲ್ಲಿ - ಬ್ರಹ್ಮದೇವರ ಅಲೌಕಿಕವಾದ ಶ್ರೇಷ್ಠವಾದ ಕರ್ಮಗಳು ಜಗತ್ತನ್ನು ಹುಟ್ಟಿಸುವವುಗಳಾಗಿ ಮತ್ತು ಪೋಷಿಸುವವುಗಳಾಗಿ ಸ್ವಾಂತರ್ಯಾಮಿಯಾದ ಸರ್ವದಾ ತನ್ನ ಅಂತರಂಗದಲ್ಲಿ ಕಾಣುವ ವಿಷ್ಣುವನ್ನು ಹೊಂದಿದ್ದವು. ಅರ್ಥಾತ್ ಬ್ರಹ್ಮದೇವರು ಅಲೌಕಿಕವಾದ ಶ್ರೇಷ್ಠವಾದ ತಪ ಆದಿ ಕರ್ಮಗಳನ್ನು ಆಚರಿಸುತ್ತಾ ಜಗತ್ಸರ್ಜನ ಶಕ್ತಿಯನ್ನು ಹಾಗು ಪೋಷಿಸುವ ಸಾಮರ್ಥ್ಯವನ್ನು ಹೊಂದಿದವರಾಗಿ ಸ್ವಾಂತರ್ಯಾಮಿಯಾದ ಸರ್ವದಾ ತನ್ನ ಎದುರಿಗೆ ಕಾಣುವ ವಿಷ್ಣುವನ್ನು ಆಶ್ರಯಿಸಿದರು. ಆದ್ದರಿಂದಲೇ ಪೂರ್ವದಲ್ಲಿ ಮುಖ್ಯಪ್ರಾಣರಾಗಿ ಅವತರಿಸಿದ ಆ ಬ್ರಹ್ಮದೇವರು ಸರ್ವದೇವತೆಗಳಲ್ಲಿ ಶ್ರೇಷ್ಠರು. ಅವರಿಗೆ ನಮಃ

ಓಂ ಯಶ್ಚಿದಾಪೋ ಮಹಿನಾ ಪರ್ಯಪಶ್ಯದ್ ದಕ್ಷಂ ದಧಾನಾ
ಜನಯಂತೀರ್ಯಜ್ಞಮ್ । ಯೋ ದೇವೇಷ್ವಧಿ ದೇವ ಏಕ
ಆಸೀತ್ ಕಸ್ಮೈ ದೇವಾಯ ಹವಿಷಾ ವಿಧೇಮ ಓಂ ॥೮॥

ಜ್ಞಾನಸ್ವರೂಪಿಯಾದ ಯಜ್ಞವನ್ನು ಚೆನ್ನಾಗಿ ರಕ್ಷಿಸುವ ವಿಷ್ಣುವು ಸೃಷ್ಟಿಸಲು ಸಮರ್ಥರಾದ ಬ್ರಹ್ಮದೇವರ ಜನನಕ್ಕೆ ಕಾರಣೀಭೂತವಾದ ಮತ್ತು ಪೋಷಕವೂ ಆದ ಕರ್ಮಗಳನ್ನು ತನ್ನ ಸಾಮರ್ಥ್ಯದಿಂದಲೇ ತಿಳಿದನು. ಅವನು ತಾನೊಬ್ಬನೇ ದೇವತೆಗಳಲ್ಲಿ ಸರ್ವೋತ್ತಮದೇವತೆಯಾಗಿದ್ದಾನೆ. ಆ ವಿಷ್ಣುವಿಗೆ ನಮಃ

ಬ್ರಹ್ಮಪಕ್ಷದಲ್ಲಿ - ಬ್ರಹ್ಮದೇವರು ವಿಶ್ವಜನಕವಾದ ಹಾಗು ಪೋಷಕವಾದ ಕರ್ಮಗಳನ್ನು ಮಾಡುತ್ತಿದ್ದರೂ ವಿಷ್ಣುವನ್ನು ತಮ್ಮ ಸಾಮರ್ಥ್ಯದಿಂದ ಸರ್ವಸಮರ್ಥನೆಂದು ತಿಳಿದರು. ಮತ್ತು ರುದ್ರಾದಿಸರ್ವದೇವತೆಗಳಿಗಿಂತಲೂ ಉತ್ತಮರು. ಆ ಬ್ರಹ್ಮದೇವರಿಗೆ ನಮಃ.

ಓಂ ಮಾ ನೋ ಹಿಂಸೀಜ್ಜನಿತಾ ಯಃ ಪೃಥಿವ್ಯಾ ಯೋ ವಾ ದಿವಂ
ಸತ್ಯಧರ್ಮಾ ಜಜಾನ । ಯಶ್ಚಾಪಶ್ಚಂದ್ರಾ ಬೃಹತೀರ್ಜಜಾನ ಕಸ್ಮೈ
ದೇವಾಯ ಹವಿಷಾ ವಿಧೇಮ ಓಂ ॥೯॥

ಪೃಥಿವಿಯ ಜನಕರು, ಪಾರಮಾರ್ಥಿಕಗುಣಕ್ರಿಯಾದಿಗಳುಳ್ಳವರು, ದ್ಯುಲೋಕೋತ್ಪಾದಕರು, ಮತ್ತು ಮಹತ್ತರವಾದ ಶ್ರೇಷ್ಠವಾದ ಸಂತೋಷಜನಕವಾದ ಕರ್ಮಗಳನ್ನು ಮಾಡುವವರು ಆದ ವಿಷ್ಣು ಬ್ರಹ್ಮರು ನಮ್ಮನ್ನು ಪೀಡಿಸದಿರಲಿ. ಅವರಿಗೆ ನಮಃ

ಓಂ ಪ್ರಜಾಪತೇ ನ ತ್ವದೇತಾನ್ಯನ್ಯೋ ವಿಶ್ವಾ ಜಾತಾನಿ ಪರಿ ತಾ
ಬಭೂವ । ಯತ್ ಕಾಮಾಸ್ತೇ ಜುಹುಮಸ್ತನ್ನೋ ಅಸ್ತು ವಯಂ
ಸ್ಯಾಮ ಪತಯೋ ರಯೀಣಾಮ್ ಓಂ ॥೧೦॥

ಹೇ ಪ್ರಜಾಪಾಲಕನಾದ ವಿಷ್ಣುವೇ ! ನೀನು ಸರ್ವಜಗತ್ತಿನಿಂದ ಭಿನ್ನನು. ನೀನು ಕೇವಲ ಸೃಷ್ಟಿಸಿದ ಎಲ್ಲ ಜಗತ್ತನ್ನು ಪರಾಭವಗೊಳಿಸಿದವನಲ್ಲ. ಸೃಷ್ಟಿಸದೇ ಇದ್ದ ಜಗತ್ತನ್ನೂ ಪರಾಭವಗೊಳಿಸಲು ಸಮರ್ಥನು. ನಾವು ನಿನ್ನನ್ನು ಏನನ್ನು ಬಯಸಿ ಹೋಮಿಸುತ್ತೇವೆಯೋ ಆ ಅಭೀಷ್ಟವನ್ನು ದಯಪಾಲಿಸು ನಾವು ಧನಾಧಿಪತಿಗಳಾಗಲು ಬಯಸುತ್ತೇವೆ. ನಿನಗೆ ನಮಃ

ಬ್ರಹ್ಮಪಕ್ಷದಲ್ಲಿ - ಹೇ ಪ್ರಜಾಪಾಲಕರಾದ ಬ್ರಹ್ಮದೇವರೇ ! ನಿಮ್ಮಿಂದ ಅನ್ಯರಾದ ಯಾರೂ ಸೃಷ್ಟಿಸಿದ ಈ ಜಗತ್ತನ್ನು ಪರಾಭವಗೊಳಿಸಲು ಸಮರ್ಥರಲ್ಲ. ನೀವೊಬ್ಬರೇ ಪರಾಭವಗೊಳಿಸುತ್ತೀರಿ. ಯಾವ ಫಲಬಯಸಿ ನಿಮ್ಮ ಯಜ್ಞಮಾಡುತ್ತೇವೆಯೋ ಆ ಫಲವು ನಮಗೆ ದೊರಕಲಿ. ನಾವು ಧನಾಧಿಪತಿಗಳಾಗಲು ಬಯಸುತ್ತೇವೆ. ನಿಮಗೆ ನಮಃ

ಓಂ ವಸುಂ ನ ಚಿತ್ರಮಹಸಂ ಗೃಣೀಷ ವಾಮಂ ಶೇವಮತಿಥಿ-
ಮದ್ವಿಷೇಣ್ಯಮ್ । ಸಂ ರಾಸತೇ ಶುರುಧೋ ವಿಶ್ವಧಾಯಸೋಽ-
ಗ್ನಿರ್ಹೋತಾ ಗೃಹಪತಿಃ ಸುವೀರ್ಯಮ್ ಓಂ ॥೧೧॥

ಹೇ ಪರಮಾತ್ಮನೇ ! ನೀನು ಸ್ತುತ್ಯನು, ಅಧಿಕ ಅನ್ನವನ್ನು ಹೊಂದಿದವನು, ಯಾರಿಂದಲೂ ನಿಂದ್ಯನಾಗದವನು ಆದ ಅಗ್ನಿದೇವತೆಯನ್ನು ನಿನ್ನಂತೆ ಆಶ್ಚರ್ಯದಾಯಕ ತೇಜಸ್ಸುಳ್ಳವನೆಂದು ಅಂಗೀಕರಿಸುವುದಿಲ್ಲ. ಆ ಅಗ್ನಿಯು ಶ್ರೀಘ್ರದಲ್ಲಿ ಶತ್ರುಗಳನ್ನು ತಡೆಯುವ ಹಾಗೂ ಶೋಕವನ್ನು ಕಳೆಯುವ ಜಗತ್ಪಾಲಕನಾದ ನಿನ್ನನ್ನು ಯಜಿಸುವವನು ಹಾಗು ಗೃಹಸ್ಥಾಶ್ರಮಿಗಳಿಗೆ ಪಾಲಕನು. ಅವನು ನನಗೆ ಮಹಾಬಲವನ್ನು ಮಹಾಪರಾಕ್ರಮವುಳ್ಳ ಪುತ್ರನನ್ನು ಕರುಣಿಸುತ್ತಾನೆ. ಹೀಗಿರುವಾಗ ಆ ಅಗ್ನಿದೇವತೆಯನ್ನು ಮೀರಿದ ನೀನು ನನಗೆ ಸ್ವಾಪೇಕ್ಷಿತ ಫಲವನ್ನು ಕರುಣಿಸುತ್ತಿ ಎಂದು ಏನು ಹೇಳಲಿ ? ಅಂತಹ ನಿನಗೆ ನಮಃ

ಬ್ರಹ್ಮಪಕ್ಷದಲ್ಲಿ -ಹೇ ಬ್ರಹ್ಮದೇವರೇ ! ನೀವು ಪೂರ್ಣಸುಖವುಳ್ಳ, ಹಾಗು ಸರ್ವತ್ರ ಇರುವ, ಪ್ರಶಂಸನೀಯನಾದ, ಉಪಜೀವ್ಯನಾದ ನಿಂದ್ಯನಾಗದ ಯಾವ ವಿಷ್ಣುವನ್ನು ವಿಚಿತ್ರವಾದ ತೇಜಸ್ಸುಳ್ಳ ಅಗ್ನಿಯಂತೆ ಎಂದು ಸ್ತುತಿಸುವಿರೋ ಆ ವಿಷ್ಣುವು ವಿಶ್ವ ಪ್ರವರ್ತಕನು. ಯಜಮಾನನು. ಗೃಹಸ್ಥಪಾಲಕನು. ಶೋಕಪರಿಹಾರಕರಾದ ವಿಶ್ವಾಧಾರಕರಾದ ನಿಮಗೆ ವಿಶ್ವವನ್ನು ಸೃಜಿಸುವ ಸಾಮರ್ಥ್ಯವನ್ನು ಕೊಡುತ್ತಾನೆ. ಅಂತಹ ನಿಮಗೆ ನಮಃ

ಓಂ ಜುಷಾಣೋ ಅಗ್ನೇ ಪ್ರತಿಹರ್ಯ ಮೇ ವಚೋ ವಿಶ್ವಾನಿ
ವಿದ್ವಾನ್ ವಯುನಾನಿ ಸುಕ್ರತೋ । ಘೃತನಿರ್ಣಿಗ್ಬ್ರಹ್ಮಣೇ
ಗಾತುಮೈರಯ ತವ ದೇವಾ ಅಜನಯನ್ನನು ವ್ರತಮ್ ಓಂ ॥೧೨॥

ಅಪ್ರಧಾನವಾದ ಜಗತ್ತಿಗೆ ಪ್ರವರ್ತಕನಾದ ಹೇ ಶ್ರೀಹರಿಯೇ ! ನನ್ನ ಮಾತನ್ನು ಕೇಳುವವನಾಗಿ ತಿಳಿದುಕೊ. ಸರ್ವಜ್ಞನಾದ ನೀನು ನಮ್ಮ ಎಲ್ಲ ತಿಳುವಳಿಕೆಯನ್ನು ತಿಳಿದವನಾಗಿದ್ದಿ. ಪ್ರಕಾಶಮಯವಾದ ನಿನ್ನ ರೂಪವನ್ನು ಗಾನಮಾಡಿಸಲು ನನ್ನನ್ನು ಅರಿತ ತತ್ತ್ವಾಭಿಮಾನಿದೇವತೆಗಳಿಗೆ ಪ್ರೇರಿಸು. ಅವರು ನಿನ್ನ ಆಜ್ಞಾರೂಪವಾದ ಕರ್ಮವನ್ನು ಅನುಸರಿಸುತ್ತಾರೆ. ಅಂತಹ ನಿನಗೆ ನಮಃ

ಬ್ರಹ್ಮಪಕ್ಷದಲ್ಲಿ - ಹೇ ವಿಶ್ವಪ್ರವರ್ತಕರಾದ ಬ್ರಹ್ಮದೇವರೆ ! ನನ್ನ ಮಾತನ್ನು ಕೇಳುವರಾಗಿ ನಿರ್ಧರಿಸಿರಿ. ಸರ್ವಜ್ಞರಾದ ನೀವು ನಮ್ಮ ಎಲ್ಲ ತಿಳುವಳಿಕೆಯನ್ನು ತಿಳಿದಿರುವಿರಿ. ಪ್ರಕಾಶಮಾನವಾದ ರೂಪವುಳ್ಳ ಹೇ ಬ್ರಹ್ಮದೇವರೆ ! ವಿಷ್ಣುವನ್ನು ಗಾನಮಾಡಲು ನನ್ನನ್ನು ಪ್ರೇರಿಸಿರಿ. ನೀವು ಪ್ರೇರಿಸಿದರೆ ಸರ್ವದೇವತೆಗಳೂ ಪ್ರೇರಿಸುವರು. ನಿಮಗೆ ನಮಃ

ಓಂ ಸಪ್ತ ಧಾಮಾನಿ ಪರಿಯನ್ನಮರ್ತ್ಯೋ ದಾಶದ್ದಾಶುಷೇ
ಸುಕೃತೇ ಮಾಮಹಸ್ವ। ಸುವೀರೇಣ ರಯಿಣಾಗ್ನೇ ಸ್ವಾಭುವಾ ಯಸ್ತ
ಆನಟ್ ಸಮಿಧಾ ತಂ ಜುಷಸ್ವ ಓಂ ॥೧೩॥

ವ್ಯಾಪ್ತನಾದ ಹೇ ವಿಷ್ಣುವೇ ! ಜೀವವಿಲಕ್ಷಣರಾದ ಬ್ರಹ್ಮದೇವರು ಪುಣ್ಯಪ್ರಾಪ್ತಿಗಾಗಿ ಸುಖಪ್ರದನಾದ, ಭೂರಾದಿ ಸಪ್ತಲೋಕಗಳನ್ನು ನಿಯಮಿಸುವುದಕ್ಕಾಗಿ ಕೊಡುವ ನಿನಗೆ ಉಪಚಾರವನ್ನು ಮಾಡಿದರು. ನೀನು ಆ ಬ್ರಹ್ಮದೇವರಿಗೆ ನಿನ್ನ ಆಜ್ಞಾಧಾರಕರಾದ ವೀರರು ವಾಸಿಸುವ ಪಾರಮೇಷ್ಠ್ಯಪದರೂಪವಾದ ಧನವನ್ನು ಕೊಟ್ಟು ಗೌರವಿಸು. ಆ

ಬ್ರಹ್ಮದೇವರು ನೀನು ಇದ್ದ ಎಲ್ಲ ಸ್ಥಳಗಳಲ್ಲಿ ಇರುತ್ತಾರೆ. ಆ ಬ್ರಹ್ಮದೇವರನ್ನು ನೀನು ತೇಜಸ್ಸಿನಿಂದ ಶೋಭಿಸುವಂತೆ ಮಾಡು. ನಿನಗೆ ನಮಃ

ಬ್ರಹ್ಮಪಕ್ಷದಲ್ಲಿ -ಹೇ ಬ್ರಹ್ಮದೇವರೇ ! ಜೀವವಿಲಕ್ಷಣನಾದ ವಿಷ್ಣುವು ಉಪಚಾರವನ್ನು ಮಾಡಿದ ಮತ್ತು ಸತ್ಕರ್ಮಗಳನ್ನು ಅನುಷ್ಠಾನಮಾಡುವ ನಿಮಗೆ ಶ್ರೇಷ್ಠಪುತ್ರನಿಂದ ಸಹಿತವಾಗಿ ಪಾರಮೇಷ್ಠ್ಯಪದರೂಪ ಧನವನ್ನು ಕೊಡುವ ಮೂಲಕ ಭೂರಾದಿ ಸಪ್ತಲೋಕಗಳನ್ನು ನಿಯಮಿಸಲು ಕೊಟ್ಟನು. ಭಕ್ತರನ್ನು ವಿಷ್ಣುವಿನ ಅಗ್ರಭಾಗದಲ್ಲಿ ಕರೆದೊಯ್ಯುವ ಹೇ ಬ್ರಹ್ಮದೇವರೆ ! ಆ ವಿಷ್ಣುವು ನನ್ನಿಂದ ಪೂಜಿಸಲ್ಪಡುವಂತೆ ಮಾಡಿರಿ. ಆ ಭಗವಂತನು ನಿಮಗೆ ವ್ಯಾಪಕನು. ನೀವು ಆ ವಿಷ್ಣುವನ್ನು ಸಮಿಧಾದಿ ಹವಿರ್ದ್ರವ್ಯಗಳಿಂದ ನಾನು ಪೂಜಿಸುವಂತೆ ಮಾಡಿರಿ. ನಿಮಗೆ ನಮಃ

ಓಂ ಯಜ್ಞಸ್ಯ ಕೇತುಂ ಪ್ರಥಮಂ ಪುರೋಹಿತಂ ಹವಿಷ್ಮಂತ ಈಳತೇ
ಸಪ್ತ ವಾಜಿನಮ್ । ಶ್ರುಣ್ವಂತಮಗ್ನಿಂ ಘೃತಪೃಷ್ಠಮುಕ್ಷಣಂ
ಪೃಣಂತಂ ದೇವಂ ಪೃಣತೇ ಸುವೀರ್ಯಮ್ ಓಂ ॥೧೪॥

ಹೇ ವಿಷ್ಣು ಬ್ರಹ್ಮರೇ ! ನೀವು ಯಜ್ಞವನ್ನು ತಿಳಿದಿರುವಿರಿ. ನೀವು ಶ್ರೇಷ್ಠರು. ಅನಾದಿಕಾಲದಿಂದ ಹಿತವನ್ನು ಬಯಸುವರು. ಭಕ್ತರ ಶ್ರುತಿಯನ್ನು ಶ್ರವಣಮಾಡುವರು. ವಿಶ್ವಪ್ರವರ್ತಕರು. ಶೋಭಾಯಮಾನವಾದ ಸತ್ಯಲೋಕ ಹಾಗು ವೈಕುಂಠಲೋಕಾಧಿಪತಿಗಳು. ಯಜಮಾನನಿಗೆ ಸತ್ಪುತ್ರಾದಿಗಳನ್ನು ಕೊಡುವರು. ಅಂತಹ ನಿಮ್ಮನ್ನು ಉದ್ದೇಶಿಸಿ ಕಶ್ಯಪಾದಿ ಸಪ್ತ ಋಷಿಗಳು ನಿಮ್ಮನ್ನು ಸ್ತೋತ್ರಮಾಡುತ್ತಾರೆ. ನಿಮಗೆ ನಮಸ್ಕಾರಗಳು.

ಓಂ ತ್ವಂ ದೂತಃ ಪ್ರಥಮೋ ವರೇಣ್ಯಃ ಸ ಹೂಯಮಾನೋ
ಅಮೃತಾಯ ಮತ್ಸ್ವ । ತ್ವಾಂ ಮರ್ಜಯನ್ ಮರುತೋ ದಾಶುಷೋ
ಗೃಹೇ ತ್ವಾಂ ಸ್ತೋಮೇಭಿರ್ಭೃಗವೋ ವಿ ರುರುಚುಃ ಓಂ ॥೧೫॥

ಹೇ ವಿಷ್ಣು ಬ್ರಹ್ಮರೇ ! ನೀವಿಬ್ಬರು ಮುಖ್ಯರು ಹಾಗು ಪ್ರಾರ್ಥನೀಯರು. ಯಜ್ಞಭಾಗವನ್ನು ಸ್ವೀಕರಿಸುವುದಕ್ಕಾಗಿ ಭಕ್ತರಿಂದ ಪ್ರಾರ್ಥ್ಯರಾಗಿ ಯಜ್ಞಸ್ಥಾನವನ್ನು ಕುರಿತು ದೂತರಂತೆ ಕಳಿಸಲ್ಪಟ್ಟವರು. ನೀವು ನನ್ನಿಂದ ಆಹೂತರಾಗಿ ಮೋಕ್ಷಫಲವನ್ನು ಕೊಟ್ಟು ನನ್ನನ್ನು ಸಂತೋಷಗೊಳಿಸಿರಿ.

ದೇವತೆಗಳು ನಿಮ್ಮನ್ನು ಉದ್ದೇಶಿಸಿ ಹವಿಸ್ಸನ್ನು ಕೊಡುವ ಯಜಮಾನನ ಮನೆಯಲ್ಲಿ ಮಾರ್ಜನಮಾಡುತ್ತಾರೆ. ಬೃಗುವಂಶಸ್ಥರು ಅಥವಾ ಬೃಗುಮೊದಲಾದವರು ನಿಮ್ಮನ್ನು 'ಹಿರಣ್ಯಗರ್ಭಸ್ಸಮವರ್ತತಾಗ್ರೇ' ಇತ್ಯಾದಿ ಮಂತ್ರಗಳಿಂದ ಸ್ತೋತ್ರಮಾಡುತ್ತಾ ಪ್ರಕಾಶಗೊಳಿಸಿದ್ದಾರೆ. ನಿಮ್ಮ ಮಹಿಮೆಯನ್ನು ತಿಳಿಸಿದ್ದಾರೆ. ಅಂತಹ ನಿಮಗೆ ನಮಃ

### ೪೨. ಪಂಚಾಕ್ಷರಬ್ರಹ್ಮಮಂತ್ರ

**ಓಂ ಬ್ರಹ್ಮಣೇ ನಮಃ ಓಂ**

ಗುಣಪೂರ್ಣನಾದ ವಿಷ್ಣುವಿಗೆ ನಮಸ್ಕಾರಗಳು.

ಚತುರ್ಮುಖಬ್ರಹ್ಮಪಕ್ಷದಲ್ಲಿ :- ಜೀವರಾಶಿಗಳನ್ನು ಅಭಿವೃದ್ಧಿಗೊಳಿಸುವ ಚತುರ್ಮುಖಬ್ರಹ್ಮದೇವರಿಗೆ ನಮಸ್ಕಾರಗಳು.

### ೪೩. ಅಷ್ಟಾಕ್ಷರಬ್ರಹ್ಮಮಂತ್ರ

**ಓಂ ಹಿರಣ್ಯಗರ್ಭಾಯ ನಮಃ ಓಂ**

೧. ಬ್ರಹ್ಮಾಂಡಾಂತರ್ಯಾಮಿಯು ೨. ಬ್ರಹ್ಮಾಂಡವನ್ನು ಕುಕ್ಷಿಯಲ್ಲಿ ಧರಿಸಿದವನು. ೩. ವಿಲಕ್ಷಣ ಸುಖವನ್ನು (ಕೇವಲ ಸ್ವರೂಪಸುಖವನ್ನು) ಸರ್ವದಾ ಅನುಭವಿಸುವವನು ಆದುದರಿಂದ ಹಿರಣ್ಯಗರ್ಭಶಬ್ದದಿಂದ ವಾಚ್ಯನಾದ ವಿಷ್ಣುವಿಗೆ ನಮಸ್ಕಾರಗಳು.

ಚತುರ್ಮುಖಬ್ರಹ್ಮಪಕ್ಷದಲ್ಲಿ :- ೧. ಲೋಕವಿಲಕ್ಷಣನಾದ ಭಗವಂತನ ಪುತ್ರರು ೨. ಶ್ರೀಹರಿಯನ್ನು ಕೊಂಡಾಡುವರು ಆದುದರಿಂದ ಹಿರಣ್ಯಗರ್ಭಶಬ್ದವಾಚ್ಯರಾದ ಚತುರ್ಮುಖಬ್ರಹ್ಮದೇವರಿಗೆ ನಮಸ್ಕಾರಗಳು.

### ೪೪. ಬಳಿತ್ಥಾ ಸೂಕ್ತಮಂತ್ರ

ಓಂ ಬಳಿತ್ಥಾ ತದ್ ವಪುಷೇ ಧಾಯಿ ದರ್ಶತಂ ದೇವಸ್ಯ ಭರ್ಗಃ
ಸಹಸೋ ಯತೋ ಜನಿ । ಯದೀಮುಪ ಹ್ವರತೇ ಸಾಧತೇ
ಮತಿರ್ಋತಸ್ಯ ಧೇನಾ ಅನಯಂತ ಸಸ್ರುತಃ ಓಂ ॥೧॥

'ತಸ್ಮೈ ನಮಃ' ಎಂಬುವುದನ್ನು ಅಧ್ಯಾಹಾರಮಾಡಿಕೊಳ್ಳಬೇಕು.

ವಿಷ್ಣುಪಕ್ಷದಲ್ಲಿ -ವಿಶ್ವಸರ್ಜನಾದಿಗುಣ ವಿಶಿಷ್ಟನಾದ ವಿಷ್ಣುವಿನ ಮೂಲರೂಪವು ಬಲಪೂರ್ಣವು ಹಾಗು ಜ್ಞಾನಪೂರ್ಣವು ಭರಣಗಮನಕರ್ತೃವು ಆಗಿದೆ. ಅದೇ ಎಲ್ಲ ರಾಮಕೃಷ್ಣಾದಿರೂಪಗಳ ಆವಿರ್ಭಾವಕ್ಕೆ ಕಾರಣವಾಗಿದೆ. ಆ ಅವತಾರಗಳಲ್ಲಿ

ಒಂದಾದುದು ಶ್ರೀರಾಮಾವತಾರವು. ಆ ಶ್ರೀರಾಮದೇವರ ಪ್ರೀತಿಗಾಗಿ ಬಲರೂಪರಾದ ವಾಯುದೇವರ ಜ್ಞಾನಪೂರ್ಣವಾದ 'ಹನೂಮಾನ್' ಎಂಬ ರೂಪವು ಆವಿರ್ಭವಿಸಿತು. ವಿಷ್ಣುವು ರಾಮರೂಪದಿಂದ ಸಮುದ್ರವನ್ನು ದಾಟಿ ಲಕ್ಷ್ಮೀಸ್ವರೂಪಳಾದ ಸೀತಾದೇವಿಯ ಸನ್ನಿಧಾನವುಳ್ಳ ಸೀತಾಕೃತಿಯನ್ನು ಸಮೀಪಿಸಿ(ಅಗ್ನಿಗೆ ಕೋಟ್ಟು) ಸೀತೇಯನ್ನು ಪುನಃ ತನ್ನ ಪಟ್ಟಣಕ್ಕೆ ಕರೆತಂದನು. ಮತ್ತು 'ಇವಳು ನಿರ್ದೋಷಳು' ಎಂಬ ಅಗ್ನಿಯ ಆನಂದಭಾಷ್ಪಯುಕ್ತವಾದ ಮಾತನ್ನು ಗೌರವಿಸಿದನು. ರಾಕ್ಷಸರಿಗೆ ಕೊಟ್ಟ ರುದ್ರದೇವರ ವರವನ್ನು (ಆ ರಾಕ್ಷಸರನ್ನು ಕೊಂದು) ನಿಷ್ಫಲ ಮಾಡಿದನು. ಅಂತಹ ರಾಮರೂಪಿ ವಿಷ್ಣುವಿಗೆ ನಮಃ

ಹನುಮತ್ಪಕ್ಷದಲ್ಲಿ -ವಾಯುದೇವರ ಮೂಲರೂಪವು ಬಲಜ್ಞಾನಾತ್ಮಕವಾದುದು. ವಿಶ್ವಪೋಷಕವಾದುದು. ಆ ರೂಪವೇ ಹನುಮದಾದಿ ಅವತಾರರೂಪಗಳಿಗೆ ಕಾರಣವು. ಆ ಅವತಾರಗಳಲ್ಲಿ ಹನುಮದವತಾರವು ಮೊದಲನೆಯದು. ವಿಷ್ಣುವಿನ ಪ್ರೇರಣೆಯಿಂದ ತತ್ಪ್ರೀತಿಗಾಗಿ ವಾಯುದೇವರು ಹನೂಮದ್ರೂಪದಿಂದ ಅವತರಿಸಿದರು. ಆ ಹನೂಮದ್ರೂಪವು ಶ್ರೀರಾಮದೇವರ ಸೇವೆಗಾಗಿ ಯಾವಾಗಲೂ ಅವರ ಹತ್ತಿರದಲ್ಲಿರುತ್ತದೆ. ಶ್ರೀರಾಮದೇವರ ದುಷ್ಟನಿಗ್ರಹ ಶಿಷ್ಟಪಾಲನರೂಪ-ಕಾರ್ಯಗಳನ್ನು ಸಾಧಿಸುತ್ತದೆ. ಆ ಹನೂಮದ್ರೂಪವು ಜ್ಞಾನಸ್ವರೂಪಿಯಾದ ಶ್ರೀರಾಮಚಂದ್ರದೇವರ ಅಮೃತಸ್ರಾವಿಯಾದ ಬಹ್ವರ್ಥಗರ್ಭಿತವಾದ ಸಂದೇಶಾತ್ಮಕ ಮಾತುಗಳನ್ನು ಸೀತಾದೇವಿಗೆ ಶ್ರವಣ ಮಾಡಿಸಿತು. ಅಂತಹ ಹನುಮದ್ರೂಪಿಯಾದ ವಾಯುದೇವರಿಗೆ ನಮಃ

ಓಂ ಪ್ರಕ್ಷೋ ವಪುಃ ಪಿತುಮಾನ್ನಿತ್ಯ ಆ ಶಯೇ ದ್ವಿತೀಯಮಾ
ಸಪ್ತಶಿವಾಸು ಮಾತೃಷು । ತೃತೀಯಮಸ್ಯ ವೃಷಭಸ್ಯ ದೋಹಸೇ
ದಶಪ್ರಮತಿಂ ಜನಯಂತ ಯೋಷಣಃ ॥೨॥

ಈ ವಿಷ್ಣುವಿನ ಶ್ರೀಕೃಷ್ಣನೆಂಬ ಎರಡನೆ ರೂಪವು ಷಡ್ಗುಣೈಶ್ವರ್ಯ ಸಂಪನ್ನವಾದುದು. ಜರಾಸಂಧಾದಿಗಳ ಸೈನ್ಯನಾಶಕವಾದುದು ಅನ್ನಾದಿಪತಿಯಾದುದು. ಬಹ್ವನ್ನಭೋಕ್ತೃವಾದುದು.

'ಪತಿಮತ್ತ್ವಂ ಸುರೂಪತ್ವಂ ಪಾತಿವ್ರತ್ಯಂ ಸುಪುತ್ರತಾ ।
ಧರ್ಮೇಸ್ಥಿತಿರ್ಹರೌಭಕ್ತಿರ್ದಾಕ್ಷ್ಯಂ ಸಪ್ತಗುಣಾಸ್ತ್ರಿಯಾಂ ॥''

ಎಂದು ಹೇಳಿದಂತೆ ಸೌಮಾಂಗಲ್ಯ, ಒಳ್ಳೆಯರೂಪ, ಪಾತಿವ್ರತ್ಯ, ಸತ್ಪುತ್ರ ಪುತ್ರಿಯುಳ್ಳುವಿಕೆ, ಧರ್ಮತತ್ಪರತೆ, ವಿಷ್ಣುವಿನಲ್ಲಿ ಭಕ್ತಿ ಕಾರ್ಯದಕ್ಷತೆ ಎಂಬ ಸಾಧು

ಸ್ತ್ರೀಗೆ ಇರಬೇಕಾದ ಸಪ್ತಸಂಖ್ಯಾಕವಾದ ಮಂಗಲಕರವಾದ ಗುಣಗಳುಳ್ಳ ದೇವಕೀ ದೇವಿಯ ಗರ್ಭದಲ್ಲಿ ಸನ್ನಿಹಿತವಾದುದು. ಇಂತಹ ಶ್ರೀಕೃಷ್ಣಪರಮಾತ್ಮನಿಗೆ ನಮಃ ಮತ್ತು ಧರ್ಮಸಂರಕ್ಷಣೆಗಾಗಿ ಅವತರಿಸಿದ ಯಾವ ವೇದವ್ಯಾಸಾಖ್ಯ ತೃತೀಯ ರೂಪದಿಂದ ಘೃತಾಚೀ ಎಂಬ ಅಪ್ಸರೆಯು ಇಂದ್ರಾದಿ ಅಷ್ಟದಿಕ್ಪಾಲಕರಿಗಿಂತಲೂ ಹಾಗು ಸೂರ್ಯಶನೈಶ್ಚರ ಇವರಿಗಿಂತಲೂ ಅಧಿಕವಾದ ಬುದ್ಧಿಯುಳ್ಳ ರುದ್ರಾಂಶರಾದ ಶುಕಾಚಾರ್ಯರನ್ನು ಹೆತ್ತಳೋ, ಮತ್ತು ಯಾವ ವೇದವ್ಯಾಸದೇವರ ಪ್ರೀತಿಗಾಗಿ ಮಧ್ಯಗೇಹಭಟ್ಟರ ಧರ್ಮಪತ್ನಿಯಾದ ವೇದವತೀದೇವಿಯು ಪೂರ್ಣಪ್ರಜ್ಞರನ್ನು ಹೆತ್ತಳೋ ಅಂತಹ ವೇದವ್ಯಾಸದೇವರಿಗೆ ನಮಃ

ಭೀಮಮಧ್ವಪಕ್ಷದಲ್ಲಿ -ವಾಯುದೇವರ 'ಭೀಮಸೇನನೆಂಬ' ಎರಡನೇ ರೂಪವು ಸೈನ್ಯನಾಶಕವಾಗಿದೆ. ಮಹಾಭೋಕ್ತೃವಾಗಿದೆ. ಶ್ರೀಹರಿಯ ತತ್ತ್ವಜ್ಞಾನಕ್ಕೆ ಸಾಧನಗಳಾದ ನಿರ್ದುಷ್ಟವಾದ ಋಗಾದಿ ಸಪ್ತಪ್ರಮಾಣಗ್ರಂಥಗಳಲ್ಲಿ ಶುದ್ಧಜ್ಞಾನವುಳ್ಳದ್ದಾಗಿದೆ. ಅಂತಹ ಭೀಮಾವತಾರಿ ವಾಯುದೇವರಿಗೆ ಮತ್ತು ಯಾವ ವಾಯುದೇವರ ಪೂರ್ಣಪ್ರಜ್ಞ-ನಾಮಕವಾದ ಮೂರನೆ ರೂಪವನ್ನು ಮಧ್ಯಗೇಹಭಟ್ಟರ ಧರ್ಮಪತ್ನಿಯಾದ ವೇದವತೀ ದೇವಿಯು ವೇದವ್ಯಾಸದೇವರ ತತ್ತ್ವಜ್ಞಾನಪ್ರಚಾರಕ್ಕಾಗಿ ವ್ಯಕ್ತಮಾಡಿದಳೋ ಅಂತಹ ಮಧ್ವಾವತಾರಿ ವಾಯುದೇವರಿಗೆ ನಮಃ

ಓಂ ನಿರ್ಯದೀಂ ಬುಧ್ನಾನ್ಮಹಿಷಸ್ಯ ವರ್ಪಸ ಈಶಾನಾಸಃ ಶವಸಾ
ಕ್ರಂತ ಸೂರಯಃ । ಯದೀಮನು ಪ್ರದಿವೋ ಮಧ್ವ ಆಧವೇ ಗುಹಾ
ಸಂತಂ ಮಾತರಿಶ್ವಾ ಮಥಾಯತಿ ಓಂ ॥೩॥

ಮಹಾಷಡ್ಗುಣಗಳುಳ್ಳ ಪೂಜ್ಯನಾದ ವಿಷ್ಣುವು ಸುಖಜ್ಞಾನಾದಿಗುಣಗಳಿಂದ ಬ್ರಹ್ಮರುದ್ರೇಂದ್ರಾದಿಲೋಕೇಶರನ್ನು ಸನಕಾದಿಜ್ಞಾನಿಗಳನ್ನು ತುಚ್ಛೀಕರಿಸಿದ್ದಾನೆ. ಮತ್ತು ಸುಖಜ್ಞಾನಗಳುಳ್ಳವನಾಗಿ ತನ್ನನ್ನು ತಿಳಿದಿರುವ ನಾರದಾದಿಗಳಿಗೆ ಅನುಗ್ರಹಿಸುವದಕ್ಕಾಗಿ ಅವರನ್ನು ಕುರಿತು ಬೇಗನೆ ಬರುವನು. ತನ್ನ ತತ್ತ್ವಜ್ಞಾನದ ಸ್ಥೈರ್ಯಕ್ಕಾಗಿ ಭಕ್ತರ ಅಜ್ಞಾನವನ್ನು ನಾಶಮಾಡುತ್ತಾನೆ. ಅವನಿಗೆ ನಮಃ

ಮಧ್ವ ಪಕ್ಷದಲ್ಲಿ - ವಾಯುದೇವರ ಜ್ಞಾನಪೂರ್ಣವಾದ ಪೂರ್ಣಬೋಧರೂಪ-ದಿಂದ ಲೋಕೇಶರಾದ ರುದ್ರಾದಿಗಳನ್ನಾರಂಭಿಸಿ ಮನುಷ್ಯೋತ್ತಮಪರ್ಯಂತ ಇರುವ ಜ್ಞಾನಿಗಳು ಪೂಜ್ಯನಾದ ಶ್ರೀಹರಿಯ ಗುಣಗಳನ್ನು ಅನಾಯಾಸೇನ ಚೆನ್ನಾಗಿ ತಿಳಿಯುವರು. ಆ ವಾಯುದೇವರು ಭೀಮಾವತಾರಾನಂತರ ಅತಿಶಯಕಾಂತಿಯುಳ್ಳ 'ಆನಂದತೀರ್ಥ'ರೆಂಬ ತೃತೀಯಾವತಾರವನ್ನು ಧರಿಸಿದವರಾಗಿ ಅವರು ಪರವಾದಿಗಳ

ನಿರ್ಗುಣತ್ವಾದಿ ವಚನಗಳಿಂದ ಗೂಹಿತನಾದ ಪರಮಾತ್ಮನನ್ನು ಅವನ ಸರ್ವಸ್ವಾಮಿತ್ವಜ್ಞಾಪನೆಗಾಗಿ ಶಾಸ್ತ್ರದಿಂದ ವಿಚಾರಿಸಿ ಗುಣಪೂರ್ಣನೆಂದು ನಿಶ್ಚಯಮಾಡಿಸುತ್ತಾರೆ. ಅಂತಹ ಮಧ್ವಾವತಾರಿ ಮುಖ್ಯಪ್ರಾಣದೇವರಿಗೆ ನಮಃ

ಓಂ ಪ್ರಯತ್ತಿತುಃ ಪರಮಾನ್ನೀಯತೇ ಪರ್ಯಾ ಪೃಕ್ಷುಧೋ
ವೀರುಧೋ ದಂಸು ರೋಹತಿ । ಉಭಾ ಯದಸ್ಯ ಜನುಷಂ
ಯದಿನ್ವತ ಆದಿದ್ಯವಿಷ್ಠೋ ಅಭವದ್ಘೃಣಾ ಶುಚಿಃ ಓಂ ॥೪॥

ಯಾವ ಅನ್ನವನ್ನು ಸರ್ವೋತ್ಕೃಷ್ಟನಾದ ವಿಷ್ಣುವಿಗೆ ಸಮರ್ಪಿಸುತ್ತೇವೆಯೋ ಆ ಅನ್ನವನ್ನೇ ಬ್ರಹ್ಮಾದಿದೇವತೆಗಳು ಸ್ವೀಕರಿಸುತ್ತಾರೆ. ವಿಷ್ಣುವಿಗೆ ನೈವೇದ್ಯಮಾಡದ ಅನ್ನವನ್ನು ಅವರು ಸರ್ವಥಾ ಸ್ವೀಕರಿಸುವುದಿಲ್ಲ ಎರಡು ಕ್ರಿಯೆಗಳು ಯಾವ ಕಾರಣ ಜನ್ಮಾವತಾರಗಳನ್ನು ಹೊಂದಿಸುತ್ತವೆಯೋ

ಮಧ್ವಪಕ್ಷದಲ್ಲಿ - ವಾಯುದೇವರನ್ನು ತಜ್ಜನಕನಾದ ಸರ್ವೋತ್ತಮನಾದ ವಿಷ್ಣುವು ಸರ್ವಕಾರ್ಯಗಳಲ್ಲಿ ಪ್ರೇರಿಸುವನು. ಬಳ್ಳಿಗಳನ್ನು ಕತ್ತರಿಸಿ ಚೂರು ಚೂರು ಮಾಡಲು ಚರ್ವಣಮಾಡುವಂತೆ (ಹಲ್ಲುಗಳಲ್ಲಿ ಜಗಿಯುವಂತೆ) ಆ ವಾಯುದೇವರು (ಮಧ್ವರೂಪದಿಂದ) ಕುವಾದಿಗಳ ಪ್ರಶ್ನೆಗಳನ್ನು ಖಂಡಿಸಲು ಅನುವಾದಮಾಡುತ್ತಾ ಮೆಲಕುಹಾಕುತ್ತಾರೆ. ಅವರನ್ನು ಲಕ್ಷ್ಮೀನಾರಾಯಣರಿಬ್ಬರೇ ಪ್ರೇರಿಸುವರು. ಅತಃ ಅವರು ಹಾಗು ಅವರ ಅವತಾರರೂಪಗಳು ಲಕ್ಷ್ಮೀನಾರಾಯಣರಿಗಿಂತಲೂ ಅವರವಾಗಿವೆ. ಅಂತಹ ವಾಯುದೇವರು ಸಜ್ಜನರಲ್ಲಿ ದಯಾವುಳ್ಳವರು. ಅತ ಏವ ಶುದ್ಧಾಂತಃಕರಣರು ಅವರಿಗೆ ನಮಃ

ಓಂ ಆದಿನ್ಮಾತೄರಾವಿಶದ್ಯಾ ಸ್ವಾ ಶುಚಿರಹಿಂಸ್ಯಮಾನ ಉರ್ವಿಯಾ
ವಿ ವಾವೃಧೇ । ಅನು ಯತ್ಪೂರ್ವಾ ಅರುಹತ್ಸನಾ ಜುವೋ ನಿ
ನವ್ಯಸೀಷ್ವವರಾಸು ಧಾವತೇ ಓಂ ॥೫॥

ವಿಷ್ಣುವು ಲೀಲೆಯಿಂದ ಕೌಸಲ್ಯಾದಿಮಾತೆಯರನ್ನು ಪ್ರವೇಶಿಸಿದರೂ ಅತ್ಯಂತಶುದ್ಧನಾಗಿ ಶುಕ್ಲಶೋಣಿತ ಸಂಬಂಧರಹಿತನಾಗಿ ತನ್ನ ಮಹಿಮೋತ್ಕರ್ಷದಿಂದ ಗರ್ಭವಾಸದುಃಖದಿಂದ ಪೀಡಿತನಾಗದೆ ಅಭಿವೃದ್ಧನಾದನು. ಹೇಗೆ ಸರ್ವಕಾಲದಲ್ಲಿ ತನ್ನ ಮಾತೆಯರಾಗುವ ಅದಿತ್ಯಾದಿಗಳನ್ನು ಪ್ರವೇಶಿಸಿದನೋ ಹಾಗೆ ನಮ್ಮಂತವರ ಅರ್ವಾಚೀನರಾದ ಅವರರಾದ ಮಾತೆಯರನ್ನು ಪುತ್ರನಾಗಿ ಪ್ರವೇಶಿಸಲು ಇಚ್ಛಿಸುತ್ತಾನೆ. ಆ ವಿಷ್ಣುವಿಗೆ ನಮಃ

ಮಧ್ವ ಪಕ್ಷದಲ್ಲಿ - ಯಾವ ವಾಯುದೇವರು ಶ್ರೀಲಕ್ಷ್ಮೀನಾರಾಯಣಪ್ರೇರಣೆಯಿಂದಲೇ ಅಂಜನಾದಿಮಾತೆಯರನ್ನು ಹನುಮದಾದ್ಯವತಾರಕಾಲದಲ್ಲಿ ಪ್ರವೇಶಿಸಿದರೂ ಶ್ರೀಲಕ್ಷ್ಮೀನಾರಾಯಣರಂತೆ ತಮ್ಮ ಮಹಿಮೋತ್ಕರ್ಷದಿಂದ ಗರ್ಭವಾಸದುಃಖದಿಂದ ಬಾಧಿತರಾಗದೇ ಅಭಿವೃದ್ಧರಾದರು. ಅಥವಾ ಬ್ರಹ್ಮಜ್ಞಾನಸಾಧನತ್ವೇನ ಮಾತೃಸ್ಥಾನೀಯವಾದ ಋಗಾದಿವಿದ್ಯೆಗಳಲ್ಲಿ ಪ್ರವೇಶವುಳ್ಳವರಾಗಿಯೂ ದುರ್ವಾದಿಗಳ ಅಪವ್ಯಾಖ್ಯಾನದಿಂದ ಕಲುಷಿತಾಂತಃಕರಣರಾಗದೆ ಶುದ್ಧಜ್ಞಾನವುಳ್ಳವರಾಗಿ ಅಭಿವೃದ್ಧರಾದರು. ಮತ್ತು ಸದಾವಿದ್ಯಮಾನನಾದ ಪರಮಾತ್ಮನನ್ನು ಪ್ರತಿಪಾದಿಸುವ ಅತ ಎವ ಮಾತೃಸ್ಥಾನೀಯವಾದ ಋಗಾದಿನಾಲ್ಕು ವೇದಗಳನ್ನು ಉಪಕ್ರಮಾದಿಷಡ್ವಿಧತಾತ್ಪರ್ಯಲಿಂಗಾನುಸಾರೇಣ ವಿಚಾರಿಸಿ ಅರ್ಥನಿಶ್ಚಯಮಾಡುತ್ತಾರೆ. ರಚಿತವಾದುದರಿಂದ ನೂತನವೆಂದೆನಿಸಿದ ಉಳಿದಿರುವ ಇತಿಹಾಸ ಪುರಾಣ ಪಂಚರಾತ್ರಗಳನ್ನು ಶೀಘ್ರದಲ್ಲೇ ಅರ್ಥೈಸುತ್ತಾರೆ. ಆ ಮಧ್ವಾವತಾರಿಯಾದ ಮುಖ್ಯಪ್ರಾಣದೇವರಿಗೆ ನಮಃ

### ೪೫. ಪಂಚಾಕ್ಷರ ಪ್ರಾಣಮಂತ್ರ

॥ ಓಂ ಪ್ರಾಣಾಯ ನಮಃ ಓಂ ॥

೧. ಅತಿಶಯೇನ ಚೆನ್ನಾಗಿ ಸರ್ವರ ಪ್ರವೃತ್ತಿಗೆ ಕಾರಣನು, ೨. ಪ್ರಾಣನಾಮಕ ವಾಯುದೇವರ ಅಂತರ್ಯಾಮಿಯು, ೩.ಪ್ರಕೃಷ್ಟವಾದ (ದುಃಖರಹಿತವಾದ) ಪರಿಪೂರ್ಣವಾದ ಆನಂದವುಳ್ಳವನು, ೪.ಪ್ರಕರ್ಷೇಣ ಚೇಷ್ಟಕನಾಗಿರುವುದರಿಂದ ವಿಷ್ಣುವನ್ನು ಪ್ರಾಣನೆಂದು ಕರೆಯುತ್ತಾರೆ. ಅವನಿಗೆ ನಮಸ್ಕಾರಗಳು.

೧.ವಿಷ್ಣುವನ್ನು ರುದ್ರಾದಿದೇವತೆಗಳಿಗಿಂತಲು ಚೆನ್ನಾಗಿ ತಿಳಿದವರು, ೨.ಭಗವಂತನ ಪ್ರೀತಿಗಾಗಿ ಚೇಷ್ಟಕರು, ೩.ವಿಷ್ಣುವಿನಿಂದಲೇ ಆನಂದಾತಿಶಯವನ್ನು ಹೊಂದಿದವರು, ಆಗಿರುವುದರಿಂದ ವಾಯುದೇವರು ಪ್ರಾಣಶಬ್ದವಾಚ್ಯರು. ಅವರಿಗೆ ನಮಸ್ಕಾರಗಳು.

### ೪೬. ಷಡಕ್ಷರ ಪ್ರಾಣಮಂತ್ರ

॥ ಓಂ ಅಪಾನಾಯ ನಮಃ ಓಂ ॥

೧.ಪಾಲಕರಹಿತನೂ ಚೇಷ್ಟಕನು, ೨.ಅಶುಭಭೋಗರಹಿತನು, ೩.ದುಷ್ಟರನ್ನು ಅಧೋಗತಿಗೆ ಕಳಿಸುವವನು, ೪.ಭಕ್ತರದೋಷಗಳನ್ನು ದೂರಮಾಡುವವನು, ಆದುದರಿಂದ ವಿಷ್ಣುವನ್ನು 'ಅಪಾನ'ನೆಂದು ಕರೆಯುತ್ತಾರೆ. ಅವನಿಗೆ ನಮಸ್ಕಾರಗಳು.

ವಾಯುಪಕ್ಷದಲ್ಲಿ -

ಅನ್ನಪಾಲಕರಿಲ್ಲದ ವಿಷ್ಣುವಿನಿಂದ ಚೇಷ್ಟಾವುಳ್ಳವರಾದುದರಿಂದ ವಾಯುದೇವರನ್ನು 'ಅಪಾನ'ನೆಂದು ಕರೆಯುತ್ತಾರೆ. ಅವರಿಗೆ ನಮಸ್ಕಾರಗಳು.

### ೪೭. ಪಂಚಾಕ್ಷರ ಪ್ರಾಣಮಂತ್ರ

**॥ ಓಂ ವ್ಯಾನಾಯ ನಮಃ ಓಂ ॥**

೧.ವಿಶೇಷತಃ ಚೆನ್ನಾಗಿ .ಎಲ್ಲರ ಪ್ರವೃತ್ತಿಗೆ ಕಾರಣನು ೨.ಗರುಡದೇವರನ್ನು ಪ್ರೇರಿಸುವವನು ೩.ಸರ್ವತ್ರ ಗರುಡನ ಮೇಲೇರಿ ಸಂಚರಿಸುವವನು ೪.ವಿಶೇಷತಃ ಚೇಷ್ಟಕನು ಆದುದರಿಂದ ವಿಷ್ಣುವನ್ನು 'ವ್ಯಾನ'ನೆಂದು ಕರೆಯುತ್ತಾರೆ. ಅವನಿಗೆ ನಮಸ್ಕಾರಗಳು.

ವಾಯುಪಕ್ಷದಲ್ಲಿ -

೧.'ವಿ'ಶಬ್ದದಿಂದ ಕರೆಯಲ್ಪಡುವ ಗರುಡದೇವರು ತದುಪಲಕ್ಷಿತ ಸರ್ವಜೀವರನ್ನು ಅವರವರ ಕಾರ್ಯಗಳಲ್ಲಿ ಚೆನ್ನಾಗಿ ಪ್ರೇರಿಸುವವರು ಮತ್ತು ೨.ಗರುಡದೇವರೇ ಮೊದಲಾದ ಸಮಸ್ತಸಾಧಕ ಜೀವರನ್ನು ಮುಕ್ತಿಕಾಲದಲ್ಲಿ ವಿಷ್ಣುವಿನ ಹತ್ತಿರ ಕರೆದುಕೊಂಡು ಹೋಗುವವರು ಆದುದರಿಂದ ವಾಯುದೇವರನ್ನು 'ವ್ಯಾನ'ನೆಂದು ಕರೆಯುತ್ತಾರೆ. ಅವರಿಗೆ ನಮಸ್ಕಾರಗಳು.

### ೪೮. ಷಡಕ್ಷರ ಪ್ರಾಣಮಂತ್ರ

**॥ ಓಂ ಉದಾನಾಯ ನಮಃ ಓಂ ॥**

೧.ರುದ್ರದೇವರ ಪಾಲಕನು ಮತ್ತು ಚೇಷ್ಟಕನು ೨.ತನ್ನ ಭಕ್ತರನ್ನು ಊರ್ಧ್ವಸ್ಥಾನಕ್ಕೆ ಕರೆದುಕೊಂಡುಹೋಗುವವನು ೩.ಜ್ಞಾನ ಹಾಗು ಸತ್ಕರ್ಮಗಳನ್ನು ಒದಗಿಸಿಕೊಡುವವನು ೪.ಸರ್ವಜಲವನ್ನು ಕೆಳಗೆ ಹರಿಯುವಂತೆ ಮಾಡಿದವನು ಆದುದರಿಂದ ವಿಷ್ಣುವನ್ನು 'ಉದಾನ'ನೆಂದು ಕರೆಯುತ್ತಾರೆ. ಅವನಿಗೆ ನಮಃ

ವಾಯುಪಕ್ಷದಲ್ಲಿ -

ರುದ್ರಪಾಲಕನಾದ ವಿಷ್ಣುವೇ ಸರ್ವೋತ್ತಮನೆಂದು ಶಿಷ್ಯರಿಗೆ (ಭಕ್ತರಿಗೆ) ಉಪದೇಶ ಮೂಲಕ ತಿಳಿಸುವುದರಿಂದ ವಾಯುದೇವರು 'ಉದಾನ' ಶಬ್ದವಾಚ್ಯರು. ಅವರಿಗೆ ನಮಃ

## ೪೯. ಷಡಕ್ಷರ ಪ್ರಾಣಮಂತ್ರ

॥ ಓಂ ಸಮಾನಾಯ ನಮಃ ಓಂ ॥

೧.ಜ್ಞಾನಪೂರ್ಣನು ೨.ಮಾನ್ಯನು ೩.ಯಾವಾಗಲೂ ರಮೆಯಿಂದ ಕೂಡಿದವನು ೪.ಉಪಾಸನೆಗೆ ಅನುಗುಣವಾದ ಫಲಪ್ರದನು ಆದುದರಿಂದ ವಿಷ್ಣುವನ್ನು 'ಸಮ'ನೆಂದು ಕರೆಯುತ್ತಾರೆ. ಚೇಷ್ಟಕನಾಗಿರುವುದರಿಂದ 'ಅನ' ಎಂದು ಕರೆಯುತ್ತಾರೆ. ಆದ್ದರಿಂದ ವಿಷ್ಣುವು 'ಸಮಾನ' ಶಬ್ದವಾಚ್ಯನು. ಅವನಿಗೆ ನಮಃ

ವಾಯುಪಕ್ಷದಲ್ಲಿ -

ವಿಷ್ಣು ಹಾಗು ರಮೆಯಿಂದ ಪ್ರೇರ್ಯರು ವಿಷ್ಣುವನ್ನು ಗೌರವಿಸುವವರಾದುದರಿಂದ ವಾಯುದೇವರನ್ನು 'ಸಮಾನ'ನೆಂದು ಕರೆಯುತ್ತಾರೆ. ಅವರಿಗೆ ನಮಃ

## ೫೦. ವೈದಿಕಾ ಸರಸ್ವತೀ ಮಂತ್ರ

ಓಂ ಗೌರೀರ್ಮಿಮಾಯ ಸಲಿಲಾನಿ ತಕ್ಷತ್ಯೇಕಪದೀ ದ್ವಿಪದೀ ಸಾ
ಚತುಷ್ಪದೀ । ಅಷ್ಟಾಪದೀ ನವಪದೀ ಬಭೂವುಷೀ ಸಹಸ್ರಾಕ್ಷರಾ
ಪರಮೇ ವ್ಯೋಮನ್ ಓಂ ॥

ಅನಂತಜಲರಾಶಿಯನ್ನು ಸೃಷ್ಟಿಕಾಲದಲ್ಲಿ ಮೊದಲು ಸೃಷ್ಟಿಸಿದ ವಿಷ್ಣುವು (ಬ್ರಹ್ಮಾಂಡದೊಳಗೆ) ಜಲವನ್ನು ಸೃಷ್ಟಿಸುವವನಾಗಿ ತಾನು ಓಂ ಎಂಬ ಒಂದು ಪದದಿಂದ ವಾಚ್ಯನಾಗಲು, ಸುಬಂತ ಹಾಗು ತಿಙಂತ ಪದವಾಚ್ಯನಾಗಲು, ಭೂರಾದಿ ವ್ಯಸ್ತ ಹಾಗು ಸಮಸ್ತ ನಾಲ್ಕು ಪದಗಳಿಂದ ವಾಚ್ಯನಾಗಲು, ಶಿಕ್ಷಾದಿಷಡಂಗಗಳು ಹಾಗು ಇತಿಹಾಸ ಪುರಾಣ ಸ್ಮೃತಿ ಇವುಗಳಿಂದ ವಾಚ್ಯನಾಗಲು ಬಯಸಿದವನಾಗಿ ಅವ್ಯಾಕೃತಾಕಾಶಾಭಿ- ಮಾನಿನೀಯಾದ ರಮಾದೇವಿಯಲ್ಲಿ ಎಲ್ಲ ಶಬ್ದಗಳನ್ನು ಹಾಗು ತದಭಿಮಾನಿನೀಯರಾದ ಸರಸ್ವತೀಭಾರತೀದೇವಿಯರನ್ನು ಉತ್ಪಾದಿಸಿದನು.

ಸರಸ್ವತೀ ಪಕ್ಷದಲ್ಲಿ - ಅನೇಕ ವರ್ಣಾದ್ಯಭಿಮಾನಿನೀಯಾದ ಸರಸ್ವತೀದೇವಿಯು ಸರ್ವವ್ಯಾಪ್ತನಾದ ಹರಿಯ ವಾಚಕವಾದ ಒಂದು ಪದಕ್ಕೆ ಹಾಗೆಯೇ ಎರಡು, ನಾಲ್ಕು ,ಎಂಟು, ಒಂಬತ್ತು ಹೀಗೆ ಸರ್ವಶಬ್ದಗಳಿಗೆ ಅಭಿಮಾನಿನೀಯಾದವಳಾಗಿ ಜಲಾಭಿಮಾನಿ ವರುಣೋಪಲಕ್ಷಿತ ವಾಗಾದ್ಯಭಿಮಾನಿ ವಹ್ನ್ಯಾದಿದೇವತೆಗಳನ್ನು ಉತ್ಪಾದಿಸಿದಳು.

**೫೧. ವೈದಿಕ ಭಾರತೀಮಂತ್ರ**

ಓಂ ಯಸ್ತೇ ಸ್ತನಃ ಶಶಯೋ ಯೋ ಮಯೋಭೂರ್ಯೇನ ವಿಶ್ವಾ
ಪುಷ್ಯಸಿ ವಾರ್ಯಾಣಿ । ಯೋ ರತ್ನಧಾ ವಸುವಿದ್ ಯಃ ಸುದತ್ರಃ
ಸರಸ್ವತಿ ತಮಿಹ ಧಾತವೇ ಕಃ ಓಂ ॥ ೧-೧೬೪-೪೯ ॥

ಜ್ಞಾನಾನಂದಾದಿಗುಣಗಳುಳ್ಳ ಹೇ ವಿಷ್ಣುವೇ ! ನಿನ್ನ ಸ್ತನವು ಸುಖಪೂರ್ಣವಾದುದು. ಸುಖಪ್ರದವಾದುದು. ರತ್ನವನ್ನು ಧರಿಸಿರುವುದು. ಬೇಡಿದ್ದನ್ನು ಚೆನ್ನಾಗಿ ಕೊಟ್ಟು ರಕ್ಷಿಸುವುದು. ಬಂಗಾರದಿಂದ ಅಲಂಕೃತವಾದುದು. ನಿನ್ನ ಸ್ತನದಿಂದಲೇ ಬ್ರಹ್ಮಾದಿಗಳನ್ನು ಪೋಷಿಸುತ್ತಿ. ಈ ಸಂಸಾರದಲ್ಲಿ ಶಿಶುವಾದ ನನಗೆ ಪಾನಮಾಡಲು ಅದನ್ನು ಪ್ರತಿಬಿಂಬಭೂತರಾದ ನಮ್ಮ ಮಾತೆಯರಲ್ಲಿ ಸೃಷ್ಟಿಸಿರುವಿ.

ಭಾರತೀಪಕ್ಷದಲ್ಲಿ - ಸರ್ವತ್ರವ್ಯಾಪ್ತನು ಅಥವಾ ಸರ್ವಜ್ಞನು ಸುಖಪೂರ್ಣನು ಬಲವುಳ್ಳವನು ಆದುದರಿಂದ 'ಸರಃ' ಎಂಬ ಶಬ್ದದಿಂದ ವಾಚ್ಯನಾದ ವಿಷ್ಣುವನ್ನು ಉಪಾಸಿಸುವ ಹೇ ಭಾರತೀದೇವಿಯೇ ! ನಿನ್ನ ಸ್ತನವು ಸುಖಪೂರ್ಣವಾದುದು. ಸುಖಪ್ರದವಾದುದು. ರತ್ನವನ್ನು ಧರಿಸಿರುವುದು. ಬೇಡಿದ್ದನ್ನು ಚೆನ್ನಾಗಿ ಕೊಟ್ಟು ರಕ್ಷಿಸುವುದು. ಬಂಗಾರದಿಂದ ಅಲಂಕೃತವಾದುದು. ನಿನ್ನ ಸ್ತನಗ್ರಹಣಯೋಗ್ಯರಾದ ರುದ್ರಾದಿಗಳನ್ನು ನೀನು ಸ್ತನಪಾನಮಾಡಿಸಿ ಪೋಷಿಸುತ್ತಿ. ಈ ಸಂಸಾರದಲ್ಲಿ ಶಿಶುವಾದ ನನಗೆ ಪಾನಮಾಡಲು (ಪ್ರತಿಬಿಂಬರಾದ )ನಮ್ಮ ಮಾತೆಯರಲ್ಲಿ ಅದನ್ನು ಸೃಷ್ಟಿಸಿರುವಿ.

**೫೨. ಪಂಚಾಕ್ಷರ ಸರಸ್ವತೀಮಂತ್ರ**

॥ ಓಂ ಬ್ರಹ್ಮಾಣ್ಯೈ ನಮಃ ಓಂ ॥

"ಅಹಂ ಬ್ರಹ್ಮಾಸ್ಮೀತಿ ವೇದ" ಎಂದು ಬೃಹದಾರಣ್ಯಕೋಪನಿಷತ್ತು ತಿಳಿಸುವಂತೆ ವಿಷ್ಣುವು ತನ್ನನ್ನು ತಾನೇ 'ಗುಣಪೂರ್ಣ' ನೆಂದು ತಿಳಿದುದರಿಂದ ಸ್ತ್ರೀರೂಪನಾದುದರಿಂದ 'ಬ್ರಹ್ಮಾಣೀ' ಶಬ್ದದಿಂದ ಕರೆಯಲ್ಪಡುವನು. ಅವನಿಗೆ ನಮಃ

ಸರಸ್ವತೀ ಪಕ್ಷದಲ್ಲಿ - ಬ್ರಹ್ಮದೇವರ ಮಡದಿಯಾದುದರಿಂದ ಸರಸ್ವತೀ ದೇವಿಯನ್ನು 'ಬ್ರಹ್ಮಾಣೀ' ಎಂದು ಕರೆಯುತ್ತಾರೆ. ಅವಳಿಗೆ ನಮಃ

**೫೩. ಪಂಚಾಕ್ಷರ ಭಾರತೀಮಂತ್ರ**

॥ ಓಂ ಬಾರತ್ಯೈ ನಮಃ ಓಂ ॥

೧.ಸರ್ವತ್ರ ಪ್ರಕಾಶಮಾನನು ಆನಂದಸ್ವರೂಪನು ಭಕ್ತರನ್ನು ದುಃಖಸಾಗರದಿಂದ ದಾಟಿಸುವವನು. ೨.ತನ್ನ ಪ್ರಕಾಶವನ್ನೇ (ಸೂರ್ಯಚಂದ್ರಾದಿಗಳಲ್ಲಿಟ್ಟು) ಚೆನ್ನಾಗಿ ವಿಸ್ತರಿಸಿದವನು ಆದುದರಿಂದ ವಿಷ್ಣುವಿನ ಒಂದು ಸ್ತ್ರೀರೂಪವನ್ನು 'ಭಾರತೀ' ಎಂದು ಕರೆಯುತ್ತಾರೆ ಅವನಿಗೆ ನಮಃ

ವಾಯುಪಕ್ಷದಲ್ಲಿ -

ಪ್ರಕಾಶಸ್ವರೂಪನಾದ ವಿಷ್ಣುವಿನಲ್ಲಿ ಭಕ್ತಿಯುಳ್ಳವರು ಜಗತ್ತನ್ನು ಭರಣಮಾಡು-ವವರು ಆದುದರಿಂದ 'ಭರತ'ಶಬ್ದವಾಚ್ಯರಾದ ವಾಯುದೇವರ ಮಡದಿಯಾದ ಭಾರತೀದೇವಿಗೆ ನಮಃ

### ೫೪ ಪಂಚಾಕ್ಷರ ಶಿವಮಂತ್ರ

॥ ಓಂ ನಮಶ್ಶಿವಾಯ ಓಂ ॥

೧.ದೋಷಗಳನ್ನು ದೂರಮಾಡುವವನು ಮತ್ತು ಸುಖಸ್ವರೂಪನು ೨.ಮಂಗಲಸ್ವರೂಪನು ೩.ಶಿವಾಂತರ್ಯಾಮಿಯು ಆದುದರಿಂದ ವಿಷ್ಣುವನ್ನು 'ಶಿವ'ನೆಂದು ಕರೆಯುತ್ತಾರೆ. ಅವನಿಗೆ ನಮಃ

ರುದ್ರಪಕ್ಷದಲ್ಲಿ -

ಪರಮಮಂಗಲವಿಷ್ಣುಪಾದೋದಕವನ್ನು (ಗಂಗಾಜಲವನ್ನು)ಶಿರಸ್ಸಿನಲ್ಲಿ ಧರಿಸಿ ಪರಮ ಮಂಗಲಸ್ವರೂಪರಾದುದರಿಂದ ರುದ್ರದೇವರನ್ನು 'ಶಿವ'ನೆಂದು ಕರೆಯುತ್ತಾರೆ. ಅವರಿಗೆ ನಮಃ

### ೫೫. ಪಂಚಾಕ್ಷರ ಪಾರ್ವತೀಮಂತ್ರ

॥ ಓಂ ನಮಶ್ಶಿವಾಯೈ ಓಂ ॥

ಮಂಗಲಸ್ವರೂಪನು ಸ್ತ್ರೀರೂಪಿಯೂ ಆದುದರಿಂದ ವಿಷ್ಣುವನ್ನು 'ಶಿವಾ' ಎಂದು ಕರೆಯುತ್ತಾರೆ. ಅವನಿಗೆ ನಮಃ

ಪಾರ್ವತೀಪಕ್ಷದಲ್ಲಿ -

ಮಂಗಲಸ್ವರೂಪಳಾದುದರಿಂದ ಪಾರ್ವತೀದೇವಿಯನ್ನು 'ಶಿವಾ' ಎಂದು ಕರೆಯುತ್ತಾರೆ. ಅವಳಿಗೆ ನಮಃ.

### ೫೬. ಷಡಕ್ಷರ ಶೇಷಮಂತ್ರ

॥ ಓಂ ಶೇಂ ಶೇಷಾಯ ನಮಃ ಓಂ ॥

ಸುಖವನ್ನೇ ಪಾನಯೋಗ್ಯವಾದ ಜಲವನ್ನಾಗಿ ಪಡೆದ (ಸರ್ವದಾ ಸುಖವನ್ನೇ ಅನುಭವಿಸುವ) ಅಥವಾ ಸುಖರೂಪಿಣೀಯಾದ ಲಕ್ಷ್ಮೀದೇವಿಯನ್ನು ಮಡದಿಯನ್ನಾಗಿ ಪಡೆದ ಪ್ರಲಯಕಾಲದಲ್ಲಿ ಎಲ್ಲರನ್ನೂ ತನ್ನ ಉದರದಲ್ಲಿ ಹಾಕಿಕೊಂಡು ತಾನೊಬ್ಬನೇ ಉಳಿಯುವ ಶ್ರೀಹರಿಗೆ ನಮಃ

ಶೇಷಪಕ್ಷದಲ್ಲಿ -

ಸುಖರೂಪಿಯಾದ ವಿಷ್ಣು ಹಾಗು ಲಕ್ಷ್ಮೀದೇವಿಯವರಿಗೆ ಶಯ್ಯಾಸ್ಥಾನೀಯನಾದ ಸುಖರೂಪಿಯಾದ ಭಗವಂತನ್ನು ಉಪಾಸ್ಯತ್ವೇನ ಇಚ್ಛಿಸುವ ಶೇಷದೇವರಿಗೆ ನಮಃ

### ೫೭. ಪಂಚಾಕ್ಷರ ಗರುಡಮಂತ್ರ

॥ ಓಂ ಕ್ಷಿಪ ಓಂ ಸ್ವಾಹಾ ಓಂ ॥

ನಮಶ್ಶಬ್ದವನ್ನು ಅಧ್ಯಾಹಾರ ಮಾಡಬೇಕು.

ಹೇ ಗುಣಪೂರ್ಣನೇ ! ನೀನು ಸ್ವಭಕ್ತರನ್ನು ಪರಿತ್ಯಜಿಸದವನು ಸರ್ವಶರೀರಿ(ಜೀವ) ರಕ್ಷಕನು. ಅಥವಾ ಹೇ ಗುಣಪೂರ್ಣನೇ ನೀನು ಅನ್ನವನ್ನು ಕೊಟ್ಟರುವಿ, ಮುಂದೆಯೂ ಹೀಗೆಯೇ ಅನ್ನವನ್ನು ಕೊಡು. ನಿನಗೆ ನಮಃ

ಗರುಡ ಪಕ್ಷದಲ್ಲಿ - ವಿಷಪರಿಹಾರಕರು ಸರ್ವವೇದಾಭಿಮಾನಿಗಳೂ ಅಹಂಕಾರತತ್ತ್ವಾಭಿಮಾನಿಗಳೂ ಆದ ಗರುಡದೇವರು ಸ್ವಭಕ್ತರನ್ನು ಬಿಡದ ವಿಷ್ಣುವಿನ ಪಾದಾಂಗುಲಿಗಳನ್ನು (ಈಕ್ಷಣೀಯತ್ವೇನ) ಬಯಸುವವರು. ಅವರಿಗೆ ನಮಃ

ವಿಶೇಷ ಃ-ಯದ್ಯಪಿ ತಾರತಮ್ಯಾನುಸಾರೇಣ ಗರುಡಮಂತ್ರವನ್ನು ಮೊದಲು ಹೇಳಿ ಅನಂತರ ಶೇಷಮಂತ್ರ ಹೇಳಿ ಶಿವಮಂತ್ರವನ್ನು ಹೇಳಬೇಕು. ಹಾಗಿದ್ದರೂ 'ಬ್ರಹ್ಮವಾಯುಶಿವಾಹೀಶವಿಪ್ಪೈಶ್ಶಕ್ರಾದಿಕೈರಪಿ' ಎಂಬ ಆಚಾರ್ಯರ ಪೂರ್ವವಚನವನ್ನು ಅನುಸರಿಸಿ ಶಿವಮಂತ್ರವನ್ನು ಮೊದಲು ಹೇಳಿ ಅನಂತರ ಶೇಷಮಂತ್ರವನ್ನು ಹೇಳಿ ಆಮೇಲೆ ಗರುಡಮಂತ್ರವನ್ನು ಹೇಳಿದ್ದಾರೆ)

### ೫೮. ಪಂಚಾಕ್ಷರ ಇಂದ್ರಮಂತ್ರ

॥ ಓಂ ಇಂದ್ರಾಯ ನಮಃ ಓಂ ॥

ಶ್ರೀಹರಿಯು ೧.ಪರಮೈಶ್ವರ್ಯವುಳ್ಳವನು. ೨.ಭಕ್ತರು ಕೊಡುವ ಹವಿರಾದಿ ವಿಷಯಪದಾರ್ಥಗಳನ್ನು ಕುರಿತು ಅವುಗಳನ್ನು ಪಡೆಯಲು ಹೋಗುವವನು. ೩.ಈ ಪ್ರಪಂಚವನ್ನು ಪ್ರತ್ಯಕ್ಷೀಕರಿಸಿದವನು. ೪.ಶೋಭಾಯಮಾನನು. ೫.ಭಕ್ತರ ಅಭೀಷ್ಟಗಳನ್ನು ಪೂರೈಸುವವನು. ಆದ್ದರಿಂದ ಅವನನ್ನು 'ಇಂದ್ರ' ನೆಂದು ಕರೆಯುತ್ತಾರೆ.ಅವನಿಗೆ ನಮಃ

ಇಂದ್ರಪಕ್ಷದಲ್ಲಿ - ಸ್ವಯೋಗ್ಯ ಐಶ್ವರ್ಯವುಳ್ಳವರಾಗಿ ಕಾಮನಾಶಕರಾದ ರುದ್ರದೇವರನ್ನು ಕುರಿತು ಲಯಕಾಲದಲ್ಲೂ ಉಮಾದೇವಿಯದ್ವಾರಾ ಲಯಹೊಂದುವವರಾದ ಕಾರಣ ಇಂದ್ರಶಬ್ದವಾಚ್ಯರಾದ ಇಂದ್ರದೇವರಿಗೆ ನಮಃ

## ೫೯. ಪಂಚಾಕ್ಷರ ಅಗ್ನಿಮಂತ್ರ

॥ ಓಂ ಅಗ್ನಯೇ ನಮಃ ಓಂ ॥

೧.ಶ್ರೀಹರಿಯು ಅಗ್ರಪೂಜೆಗೆ ಅರ್ಹನು ೨.ಸರ್ವೋತ್ತಮನು. ೩.ಪ್ರಥಮಪ್ರವರ್ತ-ಕನು. ೪. ಲಯಕಾಲದಲ್ಲಿ ಸಂಹಾರಕನು ೫.ಹವಿರ್ಭಕ್ಷಕನು. ೬. ವಿಶ್ವಪ್ರವರ್ತಕನು ಆದ್ದರಿಂದ ಅವನನ್ನು 'ಅಗ್ನಿ'ಯೆಂದು ಕರೆಯುತ್ತಾರೆ. ಅವನಿಗೆ ನಮಃ

ಅಗ್ನಿಪಕ್ಷದಲ್ಲಿ - ದೇವತೆಗಳನ್ನು ಕುರಿತು ಜಡವಾದುದರಿಂದ ಸ್ವತಃ ಗಮನಮಾಡಲು ಅಸಮರ್ಥವಾದ ಹವಿರ್ಭಾಗವನ್ನು ಒಯ್ದುಕೊಡುವವರು (ತಲುಪಿಸುವವರು) ಆದ್ದರಿಂದ ಅಗ್ನಿದೇವರನ್ನು 'ಅಗ್ನಿ'ಯೆಂದು ಕರೆಯುವರು ಅವರಿಗೆ ನಮಃ

## ೬೦. ಪಂಚಾಕ್ಷರ ಯಮಮಂತ್ರ

॥ ಓಂ ಯಮಾಯ ನಮಃ ಓಂ ॥

೧. ವಿಶ್ವವನ್ನು ನಿಯಮಿಸುವವನು. ೨.ಬ್ರಹ್ಮದೇವರಿಗೆ ಜ್ಞಾನಪ್ರದನು. ೩.ಯಮಾಂತರ್ಗತನು ಆದ್ದರಿಂದ ವಿಷ್ಣುವನ್ನು 'ಯಮ' ನೆಂದು ಕರೆಯುತ್ತಾರೆ. ಅವನಿಗೆ ನಮಃ

ಯಮಪಕ್ಷದಲ್ಲಿ - ಪಾಪಿಗಳನ್ನು ನರಕದಲ್ಲಿ ಶಿಕ್ಷಿಸುವುದರಿಂದ 'ಯಮ'ಶಬ್ದವಾಚ್ಯ-ರಾದ ಯಮದೇವರಿಗೆ ನಮಃ

## ೬೧. ಷಡಕ್ಷರ ನಿರ್ಋತಿ ಮಂತ್ರ

॥ ಓಂ ನಿರ್ಋತಯೇ ನಮಃ ಓಂ ॥

ವಿಷ್ಣುವು ಸರ್ವವ್ಯಾಪ್ತನಾದುದರಿಂದ ಅವ್ಯಾಪ್ತಸ್ಥಲಾಭಾವಾತ್ ಗಮನರಹಿತನು. ಅವನಿಗೆ ನಮಃ

ನಿರ್ಋತಿಪಕ್ಷದಲ್ಲಿ - ಅಧರ್ಮವನ್ನು ಮಾಡುವವರಿಗೆ (ಅಧರ್ಮಾಭಿಮಾನಿ-ದೇವತೆಯಾಗಿದ್ದು) ಸುಖವನ್ನು ಕಳೆಯುವ ಕೋಣಾಧಿಪತಿ ದೇವತೆಗೆ ನಮಃ

(ಶ್ರೀರಘೂತ್ತಮತೀರ್ಥರು ನಿರ್ಋತಿನಾಮಕ ದೇವತಾಂಶರು ಎಂಬ ವಾಡಿಕೆ ಉಂಟು)

**೬೨. ಷಡಕ್ಷರ ವರುಣಮಂತ್ರ**

॥ ಓಂ ವರುಣಾಯ ನಮಃ ಓಂ ॥

೧. ಶ್ರೀಹರಿಯು ನಮ್ಮ ಅಜ್ಞಾನದಿಂದ ಆವೃತನು. ೨.ಉತ್ತಮಜೀವರಾಶಿಗಳನ್ನು ಊರ್ಧ್ವಲೋಕಕ್ಕೆ ಕರೆಯದೊಯ್ಯುವವನು. ೩.ಶ್ರೇಷ್ಠಸುಖವುಳ್ಳವನು ಆಗಿರುವನು ಆದ್ದರಿಂದ ಅವನನ್ನು 'ವರುಣ'ನೆಂದು ಕರೆಯುತ್ತಾರೆ. ಅವನಿಗೆ ನಮಃ

ವರುಣಪಕ್ಷದಲ್ಲಿ - ೧. ತನ್ನಿಂದ ಅಭಿಮನ್ಯಮಾನವಾದ ಸಮುದ್ರದಿಂದ ಪೃಥಿವೀಯನ್ನು ಆವರಿಸಿದವನು ೨.ತನ್ನಿಂದ ಅಭಿಮನ್ಯವಾದ ಸಮುದ್ರದಲ್ಲಿ ಸರ್ವೋತ್ತಮನಾದ ವಿಷ್ಣುವನ್ನು ಧರಿಸಿದವನು ಆದುದರಿಂದ 'ವರುಣ' ಶಬ್ದವಾಚ್ಯರಾದ ವರುಣದೇವರಿಗೆ ನಮಃ

**೬೩. ಪಂಚಾಕ್ಷರವಾಯುಮಂತ್ರ**

॥ ಓಂ ವಾಯವೇ ನಮಃ ಓಂ ॥

೧. ಬಲರೂಪನು ಹಾಗು ಗಮನಕರ್ತೃವು ೨.ಸರ್ವಜ್ಞನು ಮತ್ತು ನಮ್ಮೆಲ್ಲ ಪ್ರಾಣಧಾರಕನು ೩.ಭಕ್ತರಿಂದ ವರಿಸಲ್ಪಟ್ಟವನು ೪.ಆಶ್ರಯನು ೫.ಬಂಧಕನು ಹಾಗು ಸಂಸಾರಮೋಚಕನು ೬.ಲಯಕರ್ತೃವು ೭.ಸರ್ವಶ್ರೇಷ್ಠನು ಆದ್ದರಿಂದ ವಿಷ್ಣುವನ್ನು 'ವಾಯು' ಎಂದು ಕರೆಯುತ್ತಾರೆ. ಅವನಿಗೆ ನಮಃ.

ವಾಯು ಪಕ್ಷದಲ್ಲಿ - ಸರ್ವತ್ರ ಪ್ರವಹಿಸುವ ಜಡವಾಯುವಿಗೆ ಅಭಿಮಾನಿಯಾದ ಪ್ರವಹವಾಯುದೇವತೆಗೆ ನಮಃ.

**೬೪ ಪಂಚಾಕ್ಷರ ಸೋಮಮಂತ್ರ**

॥ ಓಂ ಸೋಮಾಯ ನಮಃ ಓಂ ॥

೧.ಯಾವಾಗಲೂ ರುದ್ರದೇವರು ಹಾಗು ಬ್ರಹ್ಮದೇವರು ಇವರಿಂದ ಸಹಿತನು. ೨.ಚಂದ್ರಾಂತರ್ಯಾಮಿಯು ೩.ಜಗತ್ಸೃಷ್ಟಿಕರ್ತೃವು ಆಗಿರುವದರಿಂದ ವಿಷ್ಣುವನ್ನು 'ಸೋಮ'ನೆಂದು ಕೆಯುತ್ತಾರೆ. ಅವನಿಗೆ ನಮಃ

ಚಂದ್ರಪಕ್ಷದಲ್ಲಿ - ೧.ಅಮೃತಮಯನು (ಅಮೃತದಂತೆ ಸುಖಕೊಡುವವನು) ೨.ಸೋಮಯಾಗದಲ್ಲಿ ಉಪಯೋಗಿಸುವ ಸೋಮಲತೆಗೆ (ಅಮೃತಬಳ್ಳಿಗೆ) ಅಭಿಮಾನಿಯು ಆದ್ದರಿಂದ ಚಂದ್ರನು ಸೋಮಶಬ್ದವಾಚ್ಯನು. ಅವನಿಗೆ ನಮಃ

**೬೫ ಈಶಾನಷಡಕ್ಷರಮಂತ್ರ**

**॥ ಓಂ ಈಶಾನಾಯ ನಮಃ ಓಂ ॥**

೧.ಮುಕ್ತರಿಗೆ ಚೇಷ್ಟಾಪ್ರದನು ೨.ಮುಕ್ತರಿಗೆ ಸ್ವಾಮಿಯು ೩.ಸರ್ವರನ್ನು ನಿಯಮಿಸುವವನು ಆಗಿರುವುದರಿಂದ ವಿಷ್ಣುವನ್ನು 'ಈಶಾನ'ನೆಂದು ಕರೆಯುತ್ತಾರೆ. ಅವನಿಗೆ ನಮಃ

ರುದ್ರ ಪಕ್ಷದಲ್ಲಿ - ಲಕ್ಷ್ಮೀದೇವಿಗೆ ಸ್ವಾಮಿಯಾದ ಹಾಗು ಅವಳಿಗೆ ಸುಖಪ್ರದನಾದ ವಿಷ್ಣುವಿನಿಂದ ಪ್ರೇರಿಸಲ್ಪಡುವ, 'ಈಶಾನ್ಯದಿಕ್ಕಿಗೆ' ಅಭಿಮಾನಿಯಾದ 'ಈಶಾನ'ನೆಂಬ ದೇವತೆಗೆ (ರುದ್ರದೇವರಿಗೆ) ನಮಃ

**೬೬. ಷಡಕ್ಷರ ಅನಂತಮಂತ್ರ**

**॥ ಓಂ ಅನಂತಾಯ ನಮಃ ಓಂ ॥**

೧.ಸರ್ವದೇಶ ಸರ್ವಕಾಲಗಳಲ್ಲಿರುವವನು ಹಾಗು ಸರ್ವಗುಣಪರಿಪೂರ್ಣನು. ೨.ಅನಿತ್ಯತ್ವ ದೇಹನಾನಿ ದುಃಖಪ್ರಾಪ್ತಿ ಅಪೂರ್ಣತೆ ಎಂಬ ಚತುರ್ವಿಧನಾಶರಹಿತನು ಆಗಿರುವುದರಿಂದ ವಿಷ್ಣುವನ್ನು 'ಅನಂತ'ನೆಂದು ಕರೆಯುತ್ತಾರೆ. ಅವನಿಗೆ ನಮಃ.

ಶೇಷಪಕ್ಷದಲ್ಲಿ - ಭಗವಂತನನ್ನು ಧರಿಸಿದ (ಶಯ್ಯಾಸ್ಥಾನೀಯವಾದ) ಶರೀರವನ್ನು ವಿಸ್ತಾರಗೊಳಿಸುವದರಿಂದ 'ಅನಂತ'ಶಬ್ದವಾಚ್ಯರಾದ ಶೇಷದೇವರಿಗೆ ನಮಃ

**೬೭. ಪಂಚಾಕ್ಷರಬ್ರಹ್ಮಮಂತ್ರ**

**॥ ಓಂ ಬ್ರಹ್ಮಣೇ ನಮಃ ಓಂ ॥**

ಈ ಮಂತ್ರದ ವ್ಯಾಖ್ಯಾನವನ್ನು ಪೂರ್ವದಲ್ಲಿ ಮಾಡಲಾಗಿದೆ. ಅಲ್ಲಿ ಹೇಳಿದಂತೆ ಅರ್ಥೈಸಬೇಕು.

### ೬೮. ಷಡಕ್ಷರ ಸ್ಕಂದಮಂತ್ರ

॥ ಓಂ ರಂ ಸ್ಕಂದಾಯ ನಮಃ ಓಂ ॥

ಸುಖರೂಪಿಯಾದ ಸರ್ವಜ್ಞನು ಹಾಗು ಪ್ರದ್ಯುಮ್ನರೂಪದಿಂದ ಪಾಪಪುರುಷನನ್ನು ಶೋಷಣ ಮಾಡುವವನು ಆದುದರಿಂದ ಸ್ಕಂದ ಶಬ್ದವಾಚ್ಯನಾದ ಶ್ರೀಹರಿಗೆ ನಮಃ

ಸ್ಕಂದಪಕ್ಷದಲ್ಲಿ - ಸುಖಸ್ವರೂಪಿಯಾದ ಭಗವಂತನನ್ನು ಶರಣುಹೋದವನು ಅಥವಾ ತನ್ನ ಯೋಗ್ಯತೆಗೆ ಅನುಗುಣವಾಗಿ ಭಗವಂತನನ್ನು ತಿಳಿದವನು ಆದುದರಿಂದ ಸ್ಕಂದ ಶಬ್ದವಾಚ್ಯನಾದ ಷಣ್ಮುಖದೇವತೆಗೆ ನಮಃ

### ೬೯. ಅಷ್ಟಾಕ್ಷರ ಆದಿತ್ಯಮಂತ್ರ

॥ ಓಂ ಓಂ ಘೃಣಿಸ್ಸೂರ್ಯ ಆದಿತ್ಯಃ ಓಂ ॥

"ತಸ್ಮೈ ನಮಃ" ಎಂಬ ಪದಗಳನ್ನು ಅಧ್ಯಾಹಾರಮಾಡಬೇಕು.

ಶ್ರೀಹರಿಯು ಗುಣಪೂರ್ಣನು ಆದುದರಿಂದ ಓಂ ಎಂದು, ದಿವಸಹೇತುವು ಹಾಗು ಅತ್ಯಂತ ಪ್ರಕಾಶಮಾನನು ಆದುದರಿಂದ 'ಘೃಣಿ' ಎಂದು, ಜ್ಞಾನಿಗಳಿಂದ ಹೊಂದಲ್ಪಡಲು ಹಾಗು ತಿಳಿಯಲ್ಪಡಲು ಯೋಗ್ಯನಾದುದರಿಂದ ಸೂರ್ಯನೆಂದು, ಚೆನ್ನಾಗಿ ಶತ್ರುಗಳನ್ನು ನಾಶಮಾಡುವವನು ಬಹುಭೋಕ್ತೃವು ಹಾಗು ಚೆನ್ನಾಗಿ ಭಕ್ತರ ಇಷ್ಟಾರ್ಥಗಳನ್ನು ಪೂರೈಸುವವನು ಆದುದರಿಂದ ಆದಿತ್ಯನೆಂದು ಕರೆಯಲ್ಪಡುವನು. ಅವನಿಗೆ ನಮಃ

ಸೂರ್ಯ ಪಕ್ಷದಲ್ಲಿ - ದಿವಸಕ್ಕೆ ಕಾರಣನಾದ ಅದಿತಿಪುತ್ರನಾದ ಸೂರ್ಯನು ಪ್ರಕಾಶಮಾನನು. ಅವನಿಗೆ ನಮಃ

### ೭೦. ಅಷ್ಟಾಕ್ಷರಗಣಪತಿಮಂತ್ರ

॥ ಓಂ ಕ್ಷಿಪ್ರಪ್ರಸಾದಾಯ ನಮಃ ಓಂ ॥

ಗುಣಪೂರ್ಣನಾದ ಕ್ಷಿತಿಪಾಲಕನು ಹಾಗು ಶೀಘ್ರದಲ್ಲಿ ಭಕ್ತರಿಗೆ ಪ್ರಸನ್ನನಾಗುವವನು ಆದುದರಿಂದ 'ಕ್ಷಿಪ್ರಪ್ರಸಾದ' ಎಂಬ ಶಬ್ದದಿಂದ ವಾಚ್ಯನಾದ ಶ್ರೀಹರಿಗೆ ನಮಃ.

ಗಣಪತಿ ಪಕ್ಷದಲ್ಲಿ - ನೇತ್ರಗಳಿಗೆ ರೂಪಗ್ರಹಣ ಮಾಡುವ ಶಕ್ತಿಯನನ್ನು ಕೊಡುವ ಮೂಲಕ ಅವುಗಳನ್ನು ಸಂರಕ್ಷಿಸುವ (ಬಲಗಣ್ಣಿನಲ್ಲಿರುವ) ವಿಶ್ವನಾಮಕ ಶ್ರೀಹರಿಯನ್ನು ಪ್ರಸನ್ನೀಕರಿಸಿದ 'ವಿನಾಯಕ'ನಿಗೆ ನಮಃ

## ೭೧. ಅಷ್ಟಾಕ್ಷರ ಧನ್ವಂತರಿಮಂತ್ರ

॥ ಓಂ ಧಂ ಧನ್ವಂತರಯೇ ನಮಃ ಓಂ ॥

ಜಗದಾಧಾರನಾದ ಮತ್ತು ಧೀರನಾದ ಧನುರ್ವಾತಾದಿಸರ್ವರೋಗಗಳ ಪರಿಹಾರಕನಾದುದರಿಂದ 'ಧನ್ವಂತರಿ'ಎಂಬ ಶಬ್ದದಿಂದ ವಾಚ್ಯನಾದ ಶ್ರೀಹರಿಗೆ ನಮಃ.

## ೭೨. ಧನ್ವಂತರಿ ವೈದಿಕಮಂತ್ರ

ಅಯಂ ಮೇ ಹಸ್ತೋ ಭಗವಾನ್ ಅಯಂ ಮೇ ಭಗವತ್ತರಃ ।
ಅಯಂ ಮೇ ವಿಶ್ವಭೇಷಜೋಽಯಂ ಶಿವಾಭಿಮರ್ಷನಃ ॥

'ತಸ್ಮೈ ನಮಃ' ಎಂಬ ಪದದ್ವಯವನ್ನು ಅಧ್ಯಾಹಾರ ಮಾಡಿಕೊಳ್ಳಬೇಕು. ಈ ಧನ್ವಂತರಿನಾಮಕ ಭಗವಂತನು ನನಗೆ ಹಸ್ತದಂತೆ ದಾನ ಆದಾನಾದಿ ಕ್ರಿಯೆಗಳನ್ನು ಮಾಡಿಸುವವನು, ಇವನು ನನಗೆ ಐಶ್ವರ್ಯಾದಿಷಡ್ಗುಣಸಂಪನ್ನರಾದವರಲ್ಲಿ ಅತಿಶ್ರೇಷ್ಠನೆಂದು ಸಂಮತನು, ಇವನು ನನ್ನ ಸರ್ವರೋಗಾದಿ ಅನಿಷ್ಟ ನಿವರ್ತಕನು, ಇವನು ನನಗೆ ಸುಖಪ್ರದನು, ಇಂತಹ ಧನ್ವಂತರಿನಾಮಕ ವಿಷ್ಣುವಿಗೆ ನಮಸ್ಕಾರಗಳು.

ತಂತ್ರಸಾರೋಕ್ತಮಂತ್ರಾಣಾಂ ಭಾವಃ ಪ್ರಾಕೃತಭಾಷಯಾ ।
ಗುರ್ವಂತರ್ಯಾಮಿಹರಿಣಾ ವಾಚಿತಃ ಸ್ವಸ್ಯ ತುಷ್ಟಯೇ ॥
ಗುರುಹೃತ್ಪದ್ಮಗಶ್ಶ್ರೀಶಃ ಸೇವಯಾ ಮೇಽನಯಾ ಹರಿಃ ।
ಪ್ರೀತೋ ಭಕ್ತ್ಯಾದಿಕಂ ದತ್ವಾ ಕೃಪಾದೃಷ್ಟ್ಯಾಽವಲೋಕತು ॥
ಸೇವಯಾ ಮೇಽನಯಾ ಲಬ್ಧಂ ಯತ್ಕಿಂಚಿತ್ ಯದಿ ವಿದ್ಯತೇ ।
ವಾಗ್ಯಜ್ಞರೂಪಯಾ ಪುಣ್ಯಂ ಗುರವೋಽಸ್ತ್ಯಾಽಧಿಕಾರಿಣಃ ॥

ಅಸ್ಮದ್ಗುರ್ವಂತರ್ಗತ ಸತ್ಯಾತ್ಮತೀರ್ಥಾದಿ ಸಮಸ್ತ ಯತ್ಯಂತರ್ಗತ
ತಾತ್ತ್ವಿಕ ದೇವತಾಂತರ್ಗತ ಭಾರತೀರಮಣಮುಖ್ಯಪ್ರಾಣಾಂತರ್ಗತ
॥ ಶ್ರೀಕೃಷ್ಣಾರ್ಪಣಮಸ್ತು ॥